ಶ್ರೀಗುರು ಮಡಿವಾಳೇಶ್ವರ ಪ್ರಸನ್ನ



ಶ್ರೀಮನ್ನಿರಂಜನ ಅವಿರಳ ಪರಂಜ್ಯೋತಿ

ಶ್ರೀಗುರು ಗರಗದ ಮಡಿವಾಳೇಶ್ವರರ

# ಚರಿತ್ರೆಯು



೧ನೇ ಆವೃತ್ತಿ]  [ಬೆಲೆ ೧ರೂ.

ಶ್ರೀಗುರು ಮಡಿವಾಳೇಶ್ವರ ಪ್ರಸನ್ನ



ಶ್ರೀಮನ್ನಿರಂಜನ ಅವಿರಳ ಪರಂಜ್ಯೋತಿ

# ಶ್ರೀಗುರು ಗರಗದ ಮಡಿವಾಳೇಶ್ವರರ ಚರಿತ್ರೆಯು

ಲೇಖಕರು: ರಾಮಚಂದ್ರ ಬಾಳಕೃಷ್ಣ ಎಲಿಗಾರ ಗರಗ

೧ನೇ ಆವೃತ್ತಿ]



[ಬೆಲೆ ೧ ರೂ.

# ವಿಷಯಾನುಕ್ರಮಣಿಕೆ



# ತಿದ್ದುಪಡಿ

| ಪೇಜು | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೧೦ | ಸುರಗುಣಾರ್ತಿತಾಯ | ಸುರಗುಣಾರ್ಚಿತಾಯ |
| ,, | ೧೨ | ಮಡಿವಾಳೇಶ್ವಾಯ | ಮಡಿವಾಳೇಶ್ವರಾಯ |
| ೨ | ೨೨ | ಮಹಾಗುರುವೆನಿಸಿ | ಮಹಾಗುರುವೆನಿಸಿದ |
| ೩ | ೧೦ | ವರಣ | ಪಠಣ |
| ೭ | ೨೨ | ಬಟವಾಪ | ಭವವ್ಯಾಪ |
| ೯ | ೩ | ಶುಸುಕ್ತ | ಶುಷುಪ್ತಿ |
| ,, | ೧೦ | ಪರರುಣರಿಯನಿ | ವರಕರುಣಿಸಿದರೆ |
| ೧೦ | ೨೧ | ಭಟ | ಭವ |
| ೧೩ | ೧೦ | ಆಲೂರ | ಆವೂರ |
| ೨೦ | ೩ | ಶಾಪವನಿ | ಶಾಪವನು |
| ೨೧ | ೨೪ | ಭವವರಾಗಳೆ | ಭವವದಾಗಳೆ |
| ೨೪ | ೧೯ | ಪಾಸಾಂ | ಪಾನಾಂ |
| ೨೭ | ೧೪ | ಗಾಳದ | ಗಾಣದ |
| ೩೦ | ೧೪ | ಕೃಷ್ಣಾಂಬುಧಿನಿ | ಕೃಪಾಂಬುನಿಧಿ |
| ೪೩ | ೧೯ | ಕೃಷ್ಣಬಾಣಕ್ಕೆ | ಕೃಷ್ಣಚಕ್ರಕ್ಕೆ |
| ೫೭ | ೪ | ಪತಿಗಳಿರಾ | ಪತಿಗಳಿಂ |
| ೬೩ | ೨೦ | ಚಿದಂಬರೇಶ್ವರ ದರ್ಶನ (ಪ್ರಕರಣ) | |
| ೬೪ | ೧೨ | ಕುಸುಂಬಿನೇ | ಕುಟುಂಬಿನೇ |
| ೬೪ | ೧೨ | ವದಸಬಿ | ವದಸಖಿ |
| ,, | ೧೩ | ಕಸ್ಯತ್ | ಕಸ್ಮಾತ್ |
| ೬೯ | ೨೨ | ಕೊಣ್ಣೂರ | ಗೊಣ್ಣಾರ |
| ೭೫ | ೫ | ನವಾಪೂರ | ಮಾವೂರ |
| ೮೩ | | ಗರಗದಲ್ಲಿ ಮಠಸ್ಥಾಪನೆ | |
| ೮೫ | ೧೦ | ರಾಮನಗೌಡ್ರ | ರುಮಪ್ಪನವರು |
| ,, | ೧೮ | ಬಿಂಧವ್ವ | ಬಂದವ್ವ |

ಶ್ರೀಗುರು ಮಡಿವಾಳೇಶ್ವರ ಪ್ರಸನ್

# ಮುನ್ನುಡಿ

ಮಾನವ ಪ್ರಪಂಚದಲ್ಲಿ ಮುಕ್ತಿ ಮಾರ್ಗವನ್ನು ಕಂಡುಹಿಡಿಯಲು ಸಾಧನಗಳನೇಕಉಂಟು. ಅವುಗಳಲ್ಲಿ ಸದಾವಿರತಿ ಸಂಪನ್ನತೆಯನ್ನು ಪಡೆದು ತನ್ನ ಬ್ರಹ್ಮಚರ್ಯದ ತೇಜೋಬಲದಿಂದ ಜಗತ್ತನ್ನು ಬೆಳಗಿದ ಪುಣ್ಯಾತ್ಮ ವ್ಯಕ್ತಿಗಳಾದ ನಮ್ಮ ಸಾಧು ಶಿರೋಮಣಿ ಶ್ರೀಗುರು ಗರಗದ ಮಡಿವಾಳೇಶ್ವರರೂ ಒಬ್ಬರು ಏಕೆಂದರೆ?—

"ಕಾಲಪಾಶವ ಹರಿದು ಭೋಧಜಾಲವನು ತಾಭವದಿ ಹರಡಿ ಲೀಲೆಯಿಂದಲಿ ಈ ಭವವ ಧಾಟುವ ಮಹಿಮಾತ್ಮನೀ ಜಗದಿ ನಿಜ ಸಾಧುವಲ್ಲವೇನಯ್ಯಾ? ಮೇಲು ಮೇಲಾಗಿರುವ ಶಾಸ್ತ್ರಗಳು ವರ್ಣಿಸುವ ಕಾಲ ಕಾಲನ ಪಾಶ ಹರಿದೊಗಿದ ಭವಲೀಲಾತೀತ ನೀ ಜಗದಿ ನಿಜಮುಕ್ತಿ ಸಾಧುವಲ್ಲವೇನಯ್ಯಾ? ಲೀಲೆಯಿಂದಲಿ ಜಗ ಜನದಿ ಮೆರೆದಿಹ ಯೋಗಿಶ್ರೇಷ್ಠ ನಮ್ಮ ಬಾಲ ಮಡಿವಾಳೇಶ ನೀ ಭವದಿ ನಿಜ ಸಾಧುವಲ್ಲವೇನ್ನಯ್ಯ—"

ಕಾರಣ ಭವದಲ್ಲಿ ಮಾಯಾತೀತನಾಗಲು ಮಹಾತ್ಮರು ಎತ್ನಿಸುವದು ಇದೇಕಾರಣ. ಭವಕ್ಕೆ ಅಂಜದೆ ಬಂದ ಎಡರುತೊಡರುಗಳಿಗೆ ಎದೆಗೊಟ್ಟು ಜನ್ಮಕ್ಕೆ ಕಡೆಯ ಭಯವಾದ ಕಾಲಪಾಶವನ್ನು ತನ್ನ ಲೀಲೆಯಿಂದ ಹರಿದೊಗೆದು ಮಹೇಂದ್ರಾದಿ ದೇವತೆಗಳಿಂದ ಅಸಾಧ್ಯವಾದ ಚಿನ್ಮಯ ರೂಪ ಪರಮಾತ್ಮನಲ್ಲಿ ಲೀನವಾಗಲು ಎತ್ನಿಸುವದು ಮಾನವನ ಕರ್ತವ್ಯವೇ. ಈ ರೀತಿಯಾಗಿಹ ಕರ್ತವ್ಯ ಶ್ರೇಷ್ಠತೆಯನ್ನು ಹೊಂದಲು. ಮಾನವನು ಅತೀ ಯತ್ನಪಡಬೇಕಾಗುತ್ತದೆ. ಮೊದಲು ಮಾನವನು ತನ್ನ ತಾನರಿಯಲುಬೇಕು.

"ತನ್ನ ತಾನರಿಯುವದು ನಿನ್ನ ತಾನರಿತಂತೆ, ತನ್ನ ಆತ್ಮದ ಅರಿವು ಜನ್ಮ ಕಡೆಗಾಣಿಸುವದು. ಮುನ್ನ ಜಗದೀಶ ನಿನ್ನರಿವು ಬಯಸಿದ ಮಾನವನು. ತನ್ನ ತಾನರಿಯುವದು ಮುಖ್ಯವಲ್ಲವೇನಯ್ಯಾ."

ಶ್ರೀ ಗುರು ಮಡಿವಾಳೇಶ.

ಎಂಬಂತೆ ತನ್ನ ಅಂತರಾತ್ಮನಲ್ಲಿ ಒಡಮೂಡಿರುವ ಪರಮಾತ್ಮನನ್ನು ಅರಿಯುವದು ಅತಿ ಕಠಿಣವಾದರೂ ಅದನ್ನು ಪ್ರಪಂಚದಲ್ಲಿ ಸಾಧಿಸುವ ಮಹಾತ್ಮರು ಜಗತ್ತಿನಲ್ಲಿ ಮಾನವ ಶ್ರೇಷ್ಠರೆನಿಸಿ ಕೊಳ್ಳಲಿಕ್ಕೆ ಅಡ್ಡಿಯಿಲ್ಲಾ. ನಮ್ಮ ಚರಿತ್ರನಾಯಕರಾದ ಮಹಾತ್ಮಾಮಡಿವಾಳ ಶಿವಯೋಗಿಗಳು ಆತ್ಮನನ್ನು ಗೆಲಿದು ಭವತೀತರಾಗಿ ಜಗತ್ತಿನಲ್ಲಿ ಮಾನವ ಶ್ರೇಷ್ಠಜ್ಞಾನಿಗಳೆನಿಸಿಕೊಂಡರು. ಜ್ಞಾನಿಯಾರು ಎಂದರೆ.

**"ನಡೆನುಡಿಯು ಒಂದಾಗಿ ನಡಲಭಾವನೆಯು ನಿಜವಾಗಿ ನಡಮೂಡಿ**
**ನಡಹುಟ್ಟಿ ಭಾವನೆಯು ಜಗ ಜನದಿ ತಾ ತೋರಿ ನಡಲಲಿ**
**ನಿನ್ನ ನಾಮಮೂರ್ತಿಯೋ ನಡಮೂಡಿದವ ನಿಜಜ್ಞಾನಿ**
**ಯಲ್ಲವೇನಯ್ಯಾ ಶ್ರೀ ಗುರು ಮಡಿವಾಳೇಶ"**

ಈ ರೀತಿ ಜಗತ್ತಿನಲ್ಲಿ ನುಡಿದಂತೆ ನಡೆಯುವ ಮಹಾತ್ಮರು ಜಗತ್ತಿನಲ್ಲಿ ಸರ್ವ ಶ್ರೇಷ್ಠತೆಯನ್ನು ಹೊಂದುವದು ಸಹಜ. ಕಾರಣ ಭಾರತಾಂಬೆಯ ಉದರದಲ್ಲಿ ಜನಿಸಿದ ಮಹಾತ್ಮರಲ್ಲಿ ಬ್ರಹ್ಮಜ್ಞಾನ ಸಂಪನ್ನ ಬ್ರಹ್ಮಚಾರಿ ಶ್ರಿ ಗುರುಮಡಿವಾಳೇಶ್ವರರ ಚಿಕ್ಕ ಚರಿತ್ರೆಯನ್ನು ಬರೆಯಲು ಉಪಕ್ರಮಿಸಿದೆ.

ಈ ಚರಿತ್ರವನ್ನು ಬರೆದ ಶ್ರೀ ವಾ|| ರಾ॥ ರಾಮಚಂದ್ರ ಬಾಳಪ್ಪ ಎಲಿಗಾರ ಇವರು ಸಂಗ್ರಹಿಸಿದ ವಿಷಯವು ಅತಿರಮ್ಯವೂ ಸುಗಮವೂ ಅದೆ. ಇವರ ಭಾಷೆಯು ಸರಳವಾಗಿಯೂ ಸಾಮಾನ್ಯ ಜನತೆಗೆ ತಿಳಿಯುವಂತಿದೆ.

ಈ ಚರಿತ್ರೆಯಲ್ಲಿ ಅಲ್ಲಲ್ಲಿ ಉಪಯೋಗಿಸಿದ ಕಾವ್ಯಗಳು ಸರಸವಾಗಿಯೂ ರಂಜಕವಾಗಿಯೂ ಇವೆ. ಇವರು ಪ್ರತಿಯೊಂದ ಪ್ರಕರಣದ ಪೂರ್ವದಲ್ಲಿ ಉಪಯೋಗಿಸಿದ ಪದ್ಯಗಳು ಆ ಪ್ರಕರಣದ ಸಾರಾಂಶವನ್ನು ಸ್ವಚ್ಛವಾಗಿ ತಿಳಿಸಲಿವೆ.

ಉದಾ:—ಎರಡನೇ ಪ್ರಕರಣದ ಆದಿಯಲ್ಲಿ.

**ಭರದಿ ಪಟ್ಟವನೇರುತಾ ಗುರು ।**
**ವರನು ತರುತಲಿ ದೇವಗಂಗಾ |**
**ಪರ ಸು ಜಲವನು ನೀಡಿದನು ಶಾಪವನಾ ಬಾಪು**
**ರಾಜಂಗೆ ||**

ಶ್ರೀಗುರು ಮಡಿವಾಳೇಶ್ವರರು ಪಟ್ಟಾಧಿಕಾರಿಯಾದ ಬಾಪುರಾಜನಿಗೆ ಆವನ ಇಚ್ಛೆಯಂತೆ ಗಂಗಾಜಲ ತಂದು ತನ್ನ ಆಜ್ಞೆಮೀರಿದೊಡನೆ ಕೋಪ ದಿಂದ ಅವನಿಗೆ ಶಾಪವನ್ನಿತ್ತ ವಿಷಯವು ಚನ್ನಾಗಿವರ್ಣಿಸಲ್ಪಟ್ಟದೆ. ಈ ರೀತಿ ಕನ್ನಡ ಸಾಹಿತ್ಯ ವಿಷಯದಿಂದ ನಿರ್ಣಯಿಸಲ್ಪಟ್ಟು ಬರೆದಿರುವರು. ಇಂತು ಗುರುಸೇವೆಯನ್ನು ಮಾಡಿದ ಚಿಕ್ಕ ಪುಸ್ತಕಕ್ಕೆ ನನ್ನ ಸಲಹೆ ಬೇಡಿ ಗುರು ಸೇವೆಯನ್ನು ಮಾಡಿದ ಈ ಭಕ್ತಿಯನ್ನು ಬರೆದವನಿಗೂ ನನಗೂ ಮತ್ತು ಓದುಗರಿಗೂ ಶ್ರೀ ಮಡಿವಾಳೇಶ್ವರರು ಮುಕ್ತಿ ನೀಡಲೆಂದು ಬೇಡಿ ಈ ಲೇಖ ಕರು ಶ್ರೀ ಗುರುಕೃಪೆಯಿಂದ ತಮ್ಮ ಲೇಖನಿಯಲ್ಲಿ ಶ್ರೇಷ್ಠತೆಯನ್ನು ಹೊಂದಲೆಂದು ತಿಳಿಸಿ ಈ ಮುನ್ನುಡಿಯನ್ನು ಮುಗಿಸುವೆ.

ಮಾಘ ಶು ॥೧॥
೧೮೭೦ನೇ ಶಕೆ

ಶ್ರೀಮನ್ನಿರಂಜನ ಕುಮಾರಸ್ವಾಮಿ
ಗರಗ

ಶ್ರೀಗುರು ಮಡಿವಾಳೇಶ್ವರ ಪ್ರೆಸನ್

# ಪೀಠಿಕಾ

## ತನ್ನರಿವೇ ತನಗೆ ಸದ್ಗತಿಯುಲ್ಲ ವೇವಯ್ಯಾ

ನುಡಿದಂತೆ ನಡೆದರೆ ಮಹಾತ್ಮರಾಗಲು ಮಾನವನಿಗೆ ಶಕ್ಯವಿದೆ ಎಂಬದನ್ನು ತೋರಿಸಿ ಕೊಟ್ಟ ಮಹಾತ್ಮರಲ್ಲಿ ಶ್ರೀಗುರು ಯೋಗಿರಾಜ ಗರಗದಮಡಿವಾಳಶಿವಯೋಗಿಗಳು ಒಬ್ಬರು. ಇವರು ಆಚರಿಸಿದ ಅಖಂಡ ಬ್ರಹ್ಮಚರ್ಯದ ತೇಜೋಬಲವು ಜಗತ್ತಿನ ಕಣ್ಣು ಕುಕ್ಕಿಸಿದ್ದನ್ನು ಅವರಚರಿತ್ರ ಪಠಣದಿಂದ ವಾಚಕರು ಮನಗಾಣಬಹುದು. ಮಾನವನು ಬ್ರಹ್ಮಚರ್ಯದ ಬಲದಿಂದ ಜಗತ್ತಿನ ಚರಾಚರ ವಸ್ತುಗಳನ್ನು ಪಂಚಮಹಾಭೂತಗಳನ್ನು ತನ್ನ ಕೈವಶ ಮಾಡಿಕೊಳ್ಳುವನು. ಮತ್ತು ವಾಕ್‌ಶಿದ್ಧಿಯನ್ನು ಪಡೆಯುವನೆಂಬದನ್ನು ಮನಗಾಣಬಹುದು. ಇಂಥ ಪುಣ್ಯಾತ್ಮರ ಚರಿತ್ರೆಯನ್ನು ಬರೆಯುವದು ಸಲ್ಪುಕಠಿಣ. ಅದರಲ್ಲಿಯೂ ಕನ್ನಡಾಂಬೆಯ ಉದ್ಧಾರಕ್ಕಾಗಿ ಕಾಲ ಕಾಲಕ್ಕೆ ಅವತರಿಸಿದ ಪುಣ್ಯಮೂರ್ತಿಗಳಲ್ಲಿ ಈ ಮಹಾತ್ಮರು ಒಬ್ಬರು. ಕೆಸರಲ್ಲಿಯ ಕಮಲದಂತೆ ನಿರ್ಲಿಪ್ತರಾಗಿ ಪ್ರಪಂಚಕ್ಕೆ ಅಂಟಿಕೊಳ್ಳದೆ ಮುಮುಕ್ಷಮಾರ್ಗ ಸಾಧಿಸಿದರು.

ಮಹಾತ್ಮರು ಅವತರಿಸುವದು ಸುಮ್ಮನೆಯಲ್ಲ, ಕಾಲಕಾಲಕ್ಕೆ ಧರ್ಮವು ಕುಂಠಿತವಾದಾಗ ಭಕ್ತರ ಉದ್ಧಾರಕ್ಕೆ ಉದಯಿಸುವರು. ಇವರು ಉದಯಿಸುವಾಗ ಯಾವದಾದರೊಂದು ನೆವ ಮುಂದೆ ಮಾಡಿ ಜಗತ್ತಿಗೆ ತೋರಿಸುವರು. ಅದರಂತೆ ಕರ್ನಾಟಕಾಂಬೆಯ ಸಂಸ್ಥಾನ ಶಿರೋಭೂಷಣವಾದ ಕಿತ್ತೂರ ಕಲ್ಮಠದ ರಾಜಗುರುವಾದ ಪ್ರಭುಸ್ವಾಮಿಯವರ ತಪಶ್ಚರ್ಯದ ಫಲದ ಪರಶಿವನ ವರ ಪ್ರಸಾದ ರೂಪಿ ಫಲವೇ ಮಹಾತ್ಮ ಮಡಿವಾಳಶಿವಯೋಗಿಗಳಲ್ಲದೆ ಅನ್ಯಥಾ ಅಲ್ಲ. ಇಂಥ ಅವಿರಳ ಪರಂಜ್ಯೋತಿಗಳ ಜನನ ಕಾಲವು ತಿಳಿಯಲಶಕ್ಯವಾದರೂ ಇವರು ಹಿಂದುಸ್ತಾನದ ಮೊದಲನೇ ಖಾನೇ ಸುಮಾರಿಯ ಕಾಲಕ್ಕೆ ಇಲ್ಲಿಯ ಕುಲಕರ್ಣಿಯವರಿಗೆ ಕೊಟ್ಟ ಉತ್ತರದ

ಮೇಲಿಂದ ಇವರು ಸಾಧಾರಣವಾಗಿ ಕ್ರಿ ಶ. ೧೭೭೦ನೇ ಇಸ್ವಿಯಿಂದ ೮೦ರವಳಗೆ ಜನಿಸಿರಬಹುದು ಎಂದು ಹೇಳಲಾಗುತ್ತದೆ. ಆ ಕಾಲಕ್ಕೆ ಮಲಸರ್ಜ ದೊರೆಯು ಪಟ್ಟವಾಳುತ್ತಿದ್ದನು. ಅವನ ಗುರು ಪ್ರಭುಸ್ವಾಮಿಗಳು. ಆ ಪ್ರಭುದೇವರು ಮಡಿವಾಳೇಶ್ವರರ ಮರಣಾನಂತರ ಅಧಿಕಾರಿಗಳಾಗಿದ್ದರು ಅಂದಮೇಲೆ ಮಡಿವಾಳೇಶ್ವರರೆಂದು ಮಗುವಿಗೆ ನಾಮಕಾರಣ ಮಾಡಲು ಸಾಧ್ಯವಾಯಿತು. ಹೀಗಿದ್ದು ಅವರು ಮುದಿಮಡಿವಾಳೇಶ್ವರರಿಗೆ ಸಿಕ್ಕದ್ದು ಸಲ್ಪ ಅಗಮ್ಯವಾಗಿ ತೋರುವದು.

ಇನ್ನು ಮುದಿಮಡಿವಾಳಸ್ವಾಮಿಯವರು ಗುರುವಾಗಿದ್ದು ಗೀಜಗನ ಹಳ್ಳಿಯಲ್ಲಿ ಮಲ್ಲನಗೌಡರ ಮನೆತನಕ್ಕೆ ಎಂಬುದನ್ನು ವಾಚಕರು ಲಕ್ಷದಲ್ಲಿ ಇಡತಕ್ಕದ್ದು ಅಂದಮೇಲೆ ಅವರು ಮಡಿವಾಳ ಸಾಮ್ವಿಯವರ ಜನನವನ್ನು ಹೇಗೆ ಕಂಡರು.

ಈ ಮಹಾತ್ಮರ ಚರಿತ್ರೆಯು ಪುಣ್ಯಮಯವು ಅಗಮ್ಯವು ಆದಂತೆ ಸರಸವೂ ಸುಲಭವು ಅದೆ. ಯಾವ ಪುಣ್ಯಮೂರ್ತಿಯ ನಾಮ ಮಾತ್ರದಿಂದ ಜಗತ್ತು ಪುನೀತವಾಗುವಾಗ ಇವರ ಪುಣ್ಯ ಚರಿತ್ರ ಪಠಣದಿಂದ ಜಗತ್ತು ಉದ್ಧಾರವಾಗಲಾರದೇ? ಕನ್ನಡಮಾತೆಯ ಉದ್ಧಾರಕಾರ್ಯಕ್ಕಾಗಿ ಅವತರಿಸಿದ ಕರ್ನಾಟಕ ಭಕ್ತರ ಉದ್ಧಾರಕಾರ್ಯ ಕೈಕೊಂಡ ಪರಹಿತ ಪರಮಾತ್ಮನ ಚರಿತ್ರವು ಪೂಜ್ಯಗ್ರಂಥವೆಂದು ಸಂಗ್ರಹಿಸುವದು. ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯ. ಈ ಸದ್ಗುರುವು ಭವತೀತನು ಭವಲೀಲೆ ಭವದುಃಖದಳವನ್ನು ಪಾರುಮಾಡುವ ಭವನವರೆಯನಾವಿಕನೂ ಆಗಿ ಭವದಲ್ಲಿ ಭವಪಾಶಹರಿಯುವ ಮಾರ್ಗದರ್ಶಕಿಗಳಾಗಿ ಹೋದರು. ಇಂಥ ಮಹಾತ್ಮರ ಚರಿತ್ರೆಯಿಂದ ಜನದಲ್ಲಿ ಭಕ್ತಿಭಾವ ಜಾಗ್ರತೆ ಹುಟ್ಟಲೆಂದು ಮಹಾತ್ಮರಲ್ಲಿಯೂ ಪರಮಾತ್ಮನಲ್ಲಿಯೂ ಬೇಡಿ ಶ್ರೀಗುರುವನ್ನು ಮತ್ತೊಮ್ಮೆ ಪ್ರಾರ್ಥಿಸಿ ಈ ಚಿಕ್ಕ ಪೀಠಿಕೆಯನ್ನು ಮುಗಿಸುವೆ.

---

# ಶ್ರೀಗುರು ಮಡಿವಾಳೇಶ್ವರ ಪ್ರಸನ್ನ.



ನಮಃ ಸ್ವಾಂಬಾಯ ನಿತ್ಯಾಯ ಶಿವಾಯ ಪರಮಾತ್ಮನೇ ।
ಷಟ್ತ್ರಿಂಶತ್ತತ್ತ್ವಂ ಬೀಜಾಯ ಲಿಂಗರೂಪಾಯ ಗುರುವೇ । ॥೧॥

ಸಚ್ಚಿದಾನಂದ ರೂಪಾಯ! ನಮಃ ಸಾಂಬಾಯ ಶಿವಾಯನಮಃ ।
ನಮಶ್ಚಂದ್ರ ಶೇಖರಾಯನ ಮೋ ಮಹಾದೇವಾಯ ನಮಃ ॥೨॥

ಜಗನ್ಮೂಲಂ ನಿರ್ಮಲಂ ನಿತ್ಯಂ ನಿರಾಕಾರ ರೂಪಂ ಚಿನ್ಮಯಮಹೋದಧಿಂ ।
ಜಗದಾಧಾರಂ ಗುಣಾತೀತಂ ಸರ್ವಲೋಕ ಕಾರಣಂ ಸರ್ವಾಂತರ್ಯಾಮಿಂ ನಮಃ ॥೩॥

ಸತ್ಯಾಯ ಸತ್ಯ ರೂಪಾಯ ಸದಾಶಿವಾಯ ಶಂಕರಾಯ ।
ವಿಶ್ವೇಶಾಯ ವಿಶ್ವರೂಪಾಯ ವಿಶ್ವಕೌಟುಂಬಾಯ ವಿಶ್ವತ್ಮಾಯನಮಃ ॥೪॥

ಹರಾಯ ಹರಸ್ವರೂಪಾಯ ಸುರಮುನಿ ಪ್ರಪೂಜಿತಾಯ ಸುರಗಣಾಶ್ರಿತಾಯ ।
ಪರಾತ್ಮಾಯ ಪರಬ್ರಹ್ಮಾಯ ಶರಣಾಗತಾತ್ಮಾಯ ಮಡಿವಾಳೇಶ್ವಾಯನಮಃ ॥೫॥

## ಶ್ರೀಗುರು ಮಡಿವಾಳೇಶ್ವರ ಪ್ರಸನ್ನ

ಓಂ ಪರಬ್ರಹ್ಮರೂಪ । ಚಿದಾನಂದ ಸ್ವರೂಪ । ಓ ಪರತರ ಸ್ವರೂಪ ॥ ಸದಾಮುನದಾನಂದ ರೂಪ ॥

ಓಂ ಶಾಂತಿ ಭೂಷಣ । ಕರುಣಾಕರಾತ್ಮ । ಓಂ ಭ್ರಾಂತ ಬವಹರಣ । ನಿತ್ಯಗುಣಾತ್ಮ ॥

ಓಂ ಶರಣು ಜನವತ್ಸಲ | ಭಕ್ತ ಭಾವನಾತೀತ | ಓಂ ಜಗದಾನಂದ
ಲೋಲ ಗರಗದ ಯೋಗಿ ಕರುಣಾವಿಶಾಲ | ಗಿರಿಜಾವರ ಹಸ್ತ
ಗಿರಿಚಾಪ ತ್ರಿಪುರ ಸಂ | ಹರಕರ ಪಾತ್ರಕಪಾಲಿ | ಕರ ಖಡ್ಗ
ತ್ರಿಶೂಲಮಾಲಾ |

ಚರ್ಮಾಂಬರ ಮಡಿವಾಳೇಶ ರಕ್ಷಿಪುದು ||

ಓಂಕಾರ ಸ್ವರೂಪಿ ಎನಿಸಿದ ಬ್ರಹ್ಮ ವಿರಚಿತ ಬ್ರಹ್ಮಾಂಡದಲ್ಲಿ ಪರ ಶಿವನ ಅಂಶೀಭೂತ ಮಾನವನಿಗೆ ಮುಕ್ತಿ ಮಾರ್ಗ ತೋರಿಸುವ ಮಾರ್ಗ ದರ್ಶಿಗಳ ಜನನ ವಾಗುವದು, ಅತಿ ವಿರಳ ನುಡಿದಂತೆ ನಡೆದರೆ ಮಾನವನು ಮಹಾತ್ಮನಾಗುವನೆಂದು ವೇದಗಳು ಸಾರುತ್ತಿವೆ. ಇದು ಅಲ್ಲದೆ ಮಹಾತ್ಮನ ಲಕ್ಷಣಗಳನ್ನು ಹೇಳುತ್ತವೆ. ವೇದ ಸಮ್ಮತ ಲಕ್ಷಣ ಸಂಪನ್ನ ಮಹಾತ್ಮರು ಜಗದಿ ಜನ್ಮಿಸುವದು ಯುಗಾಂತರಕೊಮ್ಮೆ ಅದು ದರ್ಮೋದ್ಧಾರಕ್ಕಾಗಿ, ಗೀತಾಗುಣವಾಗಿ ಅಂದರೆ, ॥ ಯದಾ ಯದಾ ಹಿ ದರ್ಮಸ್ಯಗ್ಲಾನಿರ್ಭವತಿ ಭಾರತ ಅಬ್ಯುತನಧರ್ಮಸ್ಯ ಅಬ್ಯುದ್ಧಯುನಾಂ ಸಂಭವಾಮಿ ಯುಗೇ ಯುಗೇ. || ಪರಮಾತ್ಮನು ಜಗದ ಭೋದಕನಾಗಿಯೂ ಜಗದಲ್ಲಿಯ ಜನರ ಧರ್ಮದ ಅವನ ತಿಗಳಿಯುವದಕ್ಕಾಗಿಯೂ ಪರಮಾತ್ಮನು ಜಗದಿ ಮಾನವ ರೂಪವನ್ನು ಧರಿಸುವನು ಈ ರೀತಿ ಅವತರಿಸಿದ ಮಾನವ ರೂಪೀ ಶಿವನ ಲಕ್ಷಣಗಳೇ ಬೇರೆಯಾಗಿರುತ್ತವೆ.

ಇಂಥಹ ಧರ್ಮ ಸಂಪನ್ ಮಹಾತ್ಮರಲ್ಲಿ ನಮ್ಮ ಗರಗದ ಮಡಿವಾಳ ಶಿವಯೋಗಿಗಳೊಬ್ಬರು ಈ ಮಹಾತ್ಮರು. ತಮ್ಮ ಯೋಗ ಪ್ರಭಾವದಿಂದ ಜಗತ್ತಿನಲ್ಲಿ ಅತಿ ಯೋಗ್ಯ ಯೋಗಿ-ಶ್ರೇಷ್ಠರೆನಿಸಿಕೊಂಡರು. ನಮ್ಮ ಕನ್ನಡ ಮಾತೆಯಲ್ಲಿ ಜನಿಸಿದ ಮಹಾತ್ಮರಲ್ಲಿ ಸಂಸಾರದಲ್ಲಿ ಇದ್ದರೂ ನಿರ್ಲಿಪ್ತರಾಗಿ ಮುಮುಕ್ಷು ಮಾರ್ಗದ ಹಾದೀ ತೋರಿಸಿದಮಹಾತ್ಮರಲ್ಲಿ ಯೋಗ್ಯರೆನ್ನಲಿಕ್ಕೆ ಅಡ್ಡಿ ಯಿಲ್ಲಾ. ಕನ್ನಡ ಮಾತೆಯ ತಿಲಕ ಪ್ರದಾಯಕರಾದ ಈ ಮಹಾನುಭಾವರ ಚರಿತ್ರವು ಬರೆಯಲಿಕ್ಕೆ ಅತಿ ಕಠಿಣವಾದರೂ ಮಹಾಗುರುವೆನಿಸಿ ಮಹಾತ್ಮರ ನಾಮ ಪಠಣದಿಂದ ಸಕಲ ಪಾಪಗಳು ನಾಶವಾಗುವಾಗ ಅವರ ಸತ್ಕೀರ್ತಿಯನ್ನು ಬರೆಯಲುಪಕ್ರಮಿಸಿದ ಪಾಮರನಿಗೆ ಗುರುವು ಸದ್ಬುದ್ಧಿ

ಮನ್ನೀಯುವನೆಂಬ ಭಾವನೆಯಿಂದ ಸದ್ಗುರುವಿನ ಧ್ಯಾನಾಸಕ್ತನಾಗಿ ಈ ಚರಿತ್ರವನ್ನು ಬರೆಯಲುಪಕ್ರಮಿಸುವೆ.

ಓಂನಮ ಶಿವಾಯ ಮಂತ್ರ ಪಠಣದಿಂದ ಸಕಲಪಾಪ ಪರಿಹಾರವಾಗುತ್ತವೆ. ಅಂದಮೇಲೆ ಸಂಸಾರ ವಶದಿಂದ ಮುಕ್ತನಾಗಲು ಮಾನವನಿಗೆ ಮಾರ್ಗ ತೋರಿಸಲು ಉದಯಿಸಿದ ಮಹಾತ್ಮರ ಚರಿತ್ರೆಯಿಂದ. ಸಕಲ ಪಾಪ ಪರಿಹಾರವಾಗಲರಿಯವೇ ?

ಈ ಮಹಾ ಯೋಗೀಶ್ವರನ ಸಪ್ತ ಅಧ್ಯಾಯ ಯುಕ್ತವಾದ ಚರಿತ್ರೆಯಿಂದ ಓದುಗರು ಜೀವನ್ಮುಕ್ತಿ ಮಾರ್ಗದ ಪ್ರಥಮ ಸೋಪಾನ ಹತ್ತಿ ಮುಕ್ತಿಯನ್ನು ಪಡೆಯಲೆಂದು ಓದುಗರಿಗಾಗಿ ಸದಾದೇವಾಧಿದೇವನಾದ ಮಡಿವಾಳೇಶನನ್ನು ಪ್ರಾರ್ಥಿಸಿ ಪಠಣಯೋಗ್ಯ ಚರಿತ್ರೆಯನ್ನು ಜನತೆಗಾಗಿ ಬರೆಯಲಿಚ್ಛಿಸುವ ಈ ಪಾಮರನನ್ನು ಯೋಗೀಶ್ವರನೂ ಜನತೆಯೂ ಕ್ಷಮಿಸಲಿ.

## ಜನ್ಮ

ಪರಮ ಪರಶಿವ ಸಾಕ್ಷಿಯಿಂದಲಿ॥ ಭರದಿ ಜನಿಸಿದನಾಗ ವಿಮಲತ ಧರೆಯ
ಗುರುವರ ವೀರಕಲ್ಮಠದಿ॥

ವಾಚಕ ಮಹನೀಯರೇ ಮಹಾತ್ಮಾ ಮಡಿವಾಳ ಸ್ವಾಮಿಯವರ ಚರಿತ್ರೆ ಬರೆಯಲು ಉಪಕ್ರಮಿಸುವ ಮೊದಲು ಇವರಿಗೆ ಈ ಹೆಸರು ಬರಲು ಕಾರಣರಾದ ಇವರ ಪೂರ್ವಜರ ವಿಚಾರಕ್ಕಾಗಿ ತಮ್ಮ ಮನಸ್ಸು ಎಳೆಯಲು ನಾನು ಇಚ್ಛಿಸುತ್ತೇನೆ.

ಜಗವು ಉದಯಿಸಿದಾಗಿನಿಂದಾ ಇಲ್ಲಿಯವರೆಗೆ ಆಗಿಹೋದ ಕನ್ನಡ ಸಂಸ್ಥಾನಗಳಲ್ಲಿ ತನ್ನ ಶ್ರೇಷ್ಠತೆಯಿಂದಾ ತನ್ನ ಕೀರ್ತಿಯ ಧವಲಧ್ವಜವನ್ನು ಹಾರಾಡಿಸಿದ ಕನ್ನಡ ಮಾತೆ ಕಿತ್ತೂರ ಕೇಸರಿ ಚನ್ನಮ್ಮಾಜಿಯ ಹೆಸರು ಕೇಳದ ಕನ್ನಡಿಗರಿಲ್ಲ ಅಂಥಹ ಅಭಿಮಾನಶಾಲಿ ಕಿತ್ತೂರ ಸಂಸ್ಥಾನದ ಮೂಲಪುರುಷರು ಕಿತ್ತೂರ ಹತ್ತಿರ ಇರುವ ಗೀಜಗನಹಳ್ಳಿಯೆಂಬ ಒಂದು ಗ್ರಾಮದ ಗೌಡರು ಇವರ ಹೆಸರು ಸಣ್ಣ ಮಲ್ಲನಗೌಡರು ದೊಡ್ಡ ಮಲ್ಲನಗೌಡರುಯೆಂದು ಇವರ ಕಾಲದಲ್ಲಿ ಅಂದರೆ ೧೬ನೇ ಶತಮಾನದ ಅವಧಿಯಲ್ಲಿ

ಉತ್ತರದಿಂದಾ ನಾಲ್ಕು ಜನ ಮಹಾತ್ಮರು ಆ ಊರಿಗೆ ತೀರ್ಥಾಟನೆ ಮಾಡುತ್ತ ಬಂದರು. ಅವರಲ್ಲಿ (೧) ಶ್ರೀಗುರು ಮುದಿಮಡಿವಾಳಸ್ವಾಮಿಯವರು (೨) ಶ್ರೀಯುತ ಗುರುಸಿದ್ಧೇಶ್ವರರು. (೩) ವಿರುಪಾಕ್ಷಸ್ವಾಮಿಗಳು (೪) ಬಾಬಾಯೆಂಬ ಮುಸಲ್ಮಾನ ಸಾಧುಗಳು ಈ ನಾಲ್ವರು ಕ್ರಮವಾಗಿ ಕೆಳಗೆ ವಿವರಿಸಿದಂತೆ ಪ್ರಖ್ಯಾತರಾದರು ನಮ್ಮ ಕಥಾನಾಯಕರಾದ ಮೂಲ ಪುರುಷರಾದ ಮುದಿಮಡಿವಾಳೇಶ್ವರರು. ಗೀಜಗನಹಳ್ಳಿಯ ಗೌಡರ ಮನೆಯಲ್ಲಿಯೇ ಉಳಿದರು ಎರಡನೇಯವರಾದ ಗುರುಸಿದ್ಧಸ್ವಾಮಿಗಳು. ಹುಬ್ಬಳ್ಳಿಯಲ್ಲಿ ವಿರತರಾದರು ಮೂರನೇಯವರಾದ ವಿರುಪಾಕ್ಷಸ್ವಾಮಿಗಳುಉಪ್ಪಿನ ಬೆಟಗೇರಿಗೆ ಹೋದರು. ನಾಲ್ಕನೇಯವರಾದಮುಸಲ್ಮಾನ ಗುರುಗಳು ಅಲ್ಲಿಯೇ ಮುಸಲ್ಮಾನ ಗುರುಗಳಾಗಿ ಉಳಿದರು.

ಈ ನಾಲ್ವರಲ್ಲಿ ವೈಭವ ಸಂಪನ್ನತೆಯ ಗುರುತ್ವದಲ್ಲಿ ನಮ್ಮ ಮುದಿ ಮಡಿವಾಳೇಶ್ವರರು. ಇವರ ಗುರುಕೃಪಾ ಪ್ರಸಾದದಿಂದಲೇ ಗೀಜಗನ ಹಳ್ಳಿಯಿಂದ ಕಿತ್ತು ಸ್ಥಾಪಿಸಿದ ಸಂಸ್ಥಾನಕ್ಕೆ ಕಿತ್ತೂರಯೆಂಬ ಹೆಸರು ಬಂತು. ಆ ಸಂಸ್ಥಾನದ ಅಧಿಪತಿಯು ಮಲ್ಲಸಗೌಡರು ಅವರ ಹೆಸರೇ ಮುಂದೆ (ಸಂಗ ಮಲ್ಲಸಗೌಡರು) ಮಲಸರ್ಜ ದೇಸಾಯರುಯೆಂದು. ಅವರು ಗುರುಗಳು ಗುವ ಸುಯೋಗ ಬರುವದಕ್ಕಿಂತಾ ಸ್ವಲ್ಪಾವಧಿ ಮುಂಚೆ ನಮ್ಮ ಮುದಿ ಮಡಿವಾಳ ಸ್ವಾಮಿಗಳು ತಮ್ಮ ಮಠಕ್ಕೆ ಪ್ರಭುಸ್ವಾಮಿಗಳನ್ನು ಅಧಿಕಾರ ಸ್ಥಾನದಲ್ಲಿ ಕೂಡ್ರಿಸಿ ಕಾಲಾಧೀನವಾದರು.

ಜಗತ್ತಿನಲ್ಲಿ ಜನನ ಮರಣಗಳು ಎಂಥವರನ್ನು ಬಿಟ್ಟಿಲ್ಲ. ಅಂದ ಮೇಲೆ ಮಾನವ ರೂಪಿಯಾದಮೇಲೆ ಮಹಾತ್ಮರೂ ಸಹ ಮಾನವನ ಆಚರಣೆಗೆ ಒಳಪಡಬೇಕಾಗುತ್ತದೆ. ಅದರಂತೆ ಸ್ವಾಮಿಯವರು ಕಾಲಾಧೀನರಾದಲ್ಲೇನಾಶ್ಚರ್ಯ.?

ಮೇಲೆ ಹೇಳಿದಂತೆ ಕಾಲಾಧೀನರಾದ ಸ್ವಾಮಿಯವರ ತರುವಾಯ ಪ್ರಭುಸ್ವಾಮಿಗಳು ಮಠಾಧೀಶ್ವರರಾಗಿ ರಾಜಗುರುತ್ವದ ಪಟ್ಟವನ್ನೇರಿದರು. ಈ ಸ್ವಾಮಿಗಳವರು ಪಟ್ಟವನ್ನೇರಿದಾಗ ಕಿತ್ತೂರ ಮಲಸರ್ಜದೊರೆಯು ಅವರ ಪಟ್ಟದ ಶಿಷ್ಯನಾದನು. ಮಲಸರ್ಜ ದೊರೆ ಎಂದ ಕೂಡಲೇ ನಮ್ಮ ಓದುಗರ ಮನಸ್ಸು ಇತಿಹಾಸಕ್ಕೆ ಎಳೆಯಬೇಕು. ಮಲಸರ್ಜಪ್ರಭು ಸಾಮಾನ್ಯನಲ್ಲ. ಇವನಿಗೆ ವ್ಯಕ್ತಿಶಃ ದೊಡ್ಡ ಗುಣವಂತನೆಂದು ಹೆಸರು. ಇವನ

ಸತಿಸಿರೋಮಣಿಗಳು ಇಬ್ಬರು ಇವರಲ್ಲಿ ದೊಡ್ಡವಳಾದ ರುದ್ರಮ್ಮಾಜಿಯು ತಲ್ಲೂರ ದೇಸಾಯರ ಮಗಳು. ಕಿರಿಯುವಳಾದ ಚನ್ನಮ್ಮಾಜಿಯು ಬೆಳಗಾವಿ ಜಿಲ್ಲೆಯ ಕಾಕತಿ ದೇಸಾಯರ ಮಗಳೆಂದು ಪ್ರಾಮುಖ್ಯವಾಗಿ ಹೇಳಬಹುದು. ಹಿರಿಯುವಳಾದ ರುದ್ರಮ್ಮಾಜಿಯು ನಮ್ಮ ದೇಶದಲ್ಲಿ ಸತ್ತದಿಂದ ರಾಜ್ಯವಾಳಿದ ಬ್ರಿಟಿಷರನ್ನು ಕೂಡ ದಂಗು ಬಡಿಸಿ ಮೈಸೂರ ಹುಲಿಯೆಂದು ಖ್ಯಾತಿಪಡೆದ ಟೀಪ್ರುಸುಲ್ತಾನನ್ನು ಸೋಲಿಸಿ ಅವನಿಂದ ಜಯಮಾಲೆಯನ್ನು ಹಾಕಿಸಿಕೊಂಡ ಐತಿಹಾಸಿಕ ಸಂಗತಿಯು ಪ್ರತಿಯೊಬ್ಬ ಕನ್ನಡಿಗನಿಗೆ ಅಭಿಮಾನಾಸ್ಪದವಾದ ಮಾತು.

ಇನ್ನು ಚನ್ನಮ್ಮ ರಾಣಿಯ ವಿಷಯವಂತೂ ಇದಕ್ಕೂ ಹೆಚ್ಚಿನದು. ತನ್ನ ನಾಡಿಗಾಗಿ ನರನಾಡಿಗಳಲ್ಲಿ ರಕ್ತವಿರುವವರೆಗೆ ಪ್ರತಿಯೊಬ್ಬ ನಾಡಭಕ್ತನು ಹೋರಾಡಿ ಪ್ರಾಣಕೊಡಬೇಕೆಂದು ಕನ್ನಡಿಗರಿಗೆ ಪಾಠಹಾಕಿಕೊಟ್ಟು ತನ್ನ ಕೈಯೊಳಗಿರುವ ಖಡ್ಗದಿಂದ ಆಗಿನ ಸಂಸ್ಥಾನ ನುಂಗಲು ಕಾರಣನಾದ ಥ್ಯಾಕರೆಯನ್ನು ತನ್ನ ಖಡ್ಗದಿಂದಾ ಚೆಂಡಾಡಿ ವೀರರಾಣಿಯೆಂದು ಆ ಕೀರ್ತಿಹಿಮಾಚಲ ಜಯಭೇರಿಯನ್ನು ಹೊಡಿಸಿದಳು. ಇಂಥ ವೀರರಾಣಿಯಿಂದ ಶೋಭಿತನಾದ ಮಲಸರ್ಜ ದೊರೆಯ ರಾಜ್ಯಕ್ಕೆ ಗುರುಗಳು ನೀತಿವಚನಬೋಧಕರು ಆದ ನಮ್ಮ ಪ್ರಭುಸ್ವಾಮಿಗಳವರ ಸಿರಿಯನ್ನು ಎಂತು ಬಣ್ಣಿಸುವದು ತನ್ನ ಬ್ರಹ್ಮಚರ್ಯದ ತೇಜಸ್ಸಿನಿಂದಾ ಬೆಳಗುತ್ತಿದ್ದನು.

||ಯೋಗಸಿದ್ಧಿಯ ಪಡೆದ ಗುರುವರ ತ್ಯಾಗಬುದ್ಧಿಯ ತೋರುತಲಿ
ತಾ ಭವಯೋಗ ಮಾಯೆಯ ಬಿಡಿಸಿದನು ಮಲಸರ್ಜ ಪ್ರಭುವರನ||

ಗುರು ಪ್ರಭುವರನು ತನ್ನ ಶಿಷ್ಯ ಮಲಸರ್ಜನಿಗೆ ಸಮಯೋಚಿತ ಉಪದೇಶ ಮಾಡುತ್ತ ತನ್ನ ಗುರಿ ಸಾಧನೆಗಾಗಿ ಪರಶಿವನಲ್ಲಿ ಬೇಡುತ್ತ ನಿತ್ಯ ಕರ್ಮಾಸಕ್ತನಾಗಿ ವಿರಕ್ತ ಪ್ರಪಂಚದಲ್ಲಿ ಲೀನನಾಗಿ ಕಾಲ ಕಳೆಯುತ್ತಿದ್ದನು.

ವಿರಕ್ತರ ಪ್ರಪಂಚ ಎಂದ ಕೂಡಲೇ ನೀವು ಆಶ್ಚರ್ಯ ಚಕಿತರಾಗಬಹುದು. ಮಾನವ ರೂಪಿಯು ಜಗತ್ತಿನಲ್ಲಿ ಜನ್ಮ ಧರಿಸಿದ ಮೇಲೆ ಅವನಿಗೆ ಒಂದುಗುರಿ ಅರ್ಥಾತ ಕಾರ್ಯ ಪ್ರವರ್ತಿ ಮಾಡುವ ಇಚ್ಛೆಯಿರಲೇಬೇಕು ದೇವರು ಅವತರಿಸಿದಾಗ್ಯು ಕೂಡ ಅವನಿಗೆ ಒಂದು ಕರ್ತವ್ಯಬರುತ್ತದೆ ಆತನು

ತನ್ನ ಕರ್ತವ್ಯವನ್ನು ಪೂರ್ತಿ ಮಾಡಲೇಬೇಕು ಅದರಂತೆ ಪ್ರಭುವರನಿಗೂ ಒಂದು ಜನ್ಮವಗುರಿಯಿತ್ತು ಅದೇನು ತಾನು ವಿರಕ್ತನಿದ್ದಾಗ್ಯೂ ತನ್ನ ಪವಿತ್ರ ಮಠಕ್ಕೆ ಯೋಗ್ಯ ವ್ಯಕ್ತಿಯು ಅಧಿಕಾರಿಯಾಗಬೇಕೆಂದು ಅವನು ರಥ ಯೋಗ್ಯ ಅಯೋಣಿಜಕುವರನಿಗಾಗಿ ಪರಶಿವನಲ್ಲಿ ಬೇಡುತ್ತಿದ್ದನು ಈ ಪರಿ ಭಕ್ತಿಪೂರ್ವಕವಾಗಿ ಶಿವಾರಾಧನೆ ಮಾಡುತ್ತಿದ್ದ ಪ್ರಭುವರನು ದೇವ ಕುವರನ ಚಿಂತೆಯಲ್ಲಿ ಸದಾ ಮಗ್ನನಾಗಿರುತ್ತಿದ್ದನು.

ನೋಡಿ ವಾಚಕರೇ ದೇವನು ಭಕ್ತ ಪರಾಧೀನನಲ್ಲವೇ? ಅಂತೆಯೇ ಅವನಿಗೆ ಭಕ್ತ ವತ್ಸಲನೆಂಬ ಹೆಸರು ಸಾರ್ಥಕವಾಗಿರುವದು ಪರಶಿವನನ್ನು ಪ್ರಭುವರನು ಏಕೋಭಾವದಿಂದ ಸ್ಮರಿಸುತ್ತ ಲೀನನಾಗಿದ್ದನು. ಪ್ರಭುವರನ ತಪಃಪ್ರಭಾವಕ್ಕಾಗಿ ಕೈಲಾಸದಲ್ಲಿ ತಾಂಡವನೃತ್ಯ ಮಾಡುತ್ತಿದ್ದ ಶಿವನ ಮನಸ್ಸುಕೂಡಾ ಚಲ ವಿಚಲ ಮಾಡದೆ ಬಿಡಲಿಲ್ಲಾ ಆಗ ಭಕ್ತ ವತ್ಸಲನಾದ ಶಂಕರನು ತನ್ನ ತಾಂಡವನೃತ್ಯವನ್ನು ನಿಲ್ಲಿಸಿ ಭಕ್ತಪ್ರಭುವರನ ಇಚ್ಛೆಯನ್ನು ಪೂರ್ತಿಗೊಳಿಸುವ ಲವಲವಿಕೆಯಿಂದ ತನ್ನ ಪ್ರಮಥಗಣಗಳ ಸಭೆ ಕರೆದನು.

ಆ ಸಭೆಯಲ್ಲಿ ಪರಶಿವನು ತನ್ನ ವಾಹನನಾದ ನಂದೀಶನನ್ನು ಕರೆದು ಇಂತೆಂದನು— "ನಂದೀಶ್ವರಾ, ಭೂಲೋಕದಲ್ಲಿ ಭಾರತದ ಸಂಸ್ಥಾನ ಶಿರೋಭೂಷಣರಾದ ಕಿತ್ತೂರ ಸಂಸ್ಥಾನದ ರಾಜಗುರುವಾದ ಪ್ರಭುವರನು ತನ್ನ ಮಠಾಧಿಕಾರಕ್ಕಾಗಿ ಅಯೋಜಿನ ಕುವರನನ್ನು ಬೇಡುತ್ತಿರುವನು ಅದರ ಸಿದ್ಧಿಗಾಗಿ. ತನ್ನಲ್ಲಿ ಅಚಲ ಭಕ್ತಿಯನ್ನಿಟ್ಟು ಘೋರ ತಪಶ್ಚರ್ಯ ವನ್ನು ಮಾಡುತ್ತಿರುವನು. ಅವನ ಮನಸ್ಸಿನ ಇಚ್ಛೆಯನ್ನು ಪೂರ್ತಿ ಮಾಡುವದಕ್ಕಾಗಿ ಭೂಲೋಕಕ್ಕೆ ಯಾರು ಅವತರಿಸಬೇಕು? ಎಂದು ಪ್ರಶ್ನೆಮಾಡಿ ಶಂಕರನು ತಾನೇ "ನಂದೀಶಾ ವೀರಭದ್ರನನ್ನು ಕರೆಯೆಂದು ಆಜ್ಞಾಪಿಸಿದನು. ಆಗ ನಂದೀಶನು ಶಿವಪುತ್ರನನ್ನು ಕರೆದನು.

ನೋಡಿ ವಾಚಕ ಮಹನೀಯರೇ ಭಕ್ತಮನವಾಂಛಿತ ಪೂರ್ತಿಗಾಗಿ ಪರಶಿವನು ಪ್ರಭುವಿಗೆ ವರಕೊಡಲು ಸಿದ್ಧನಾದನು. ತನ್ನ ಭಕ್ತ ಪ್ರಭು ವರನ ಮಗನಾಗಿ ಅವತರಿಸಲು ವೀರೇಶನನ್ನು ಶಿವನು ಈಪರಿ ಪ್ರಶ್ನಿಸಿದನು. ಮಗು ನನ್ನ ಭಕ್ತ ಪ್ರಭುವರನ ಇಚ್ಛಾ ಪೂರ್ತಿಗಾಗಿ ನೀನು ಭೂಲೋಕ

ವಲ್ಲಿ ಜನ್ಮವೆತ್ತಬೇಕು. ಎಂದು ಹೇಳಿದ ಕೂಡಲೇ ವೀರಭದ್ರ ದೇವರು ' ತಂದೆಯೇ ಭೂಲೋಕವು ಮಾಯೆಯ ತವರೂರು ಸ್ತ್ರೀಗರ್ಭ ಜನಿತ ಜನ್ಮವು ಅತಿ ಹೇಯವು. ಆ ನರಕ ಯಾತನೆಯನ್ನನುಭವಿಸಲು ನಾನೊಲ್ಲೆ ಮತ್ತಾರಿಗಾದರೂ ಹೇಳಿ. ಎಂದು ಉತ್ತರ ಕೊಟ್ಟನು. ಆಗ ಶಿವನು ಮಗುವೇ ನಾನು ಭಕ್ತವತ್ಸಲನಲ್ಲವೇ? ನನ್ನ ಪ್ರಭುವಿಗೆ ಕಾಲಗತಿಗನುಸಾರ ವಾಗಿ ನೀನೇ ಯೋಗ್ಯಪುತ್ರನು. ನಿನ್ನಿಚ್ಛೆಯಂತೆ ನಿನ್ನ ಜನ್ಮವು. ಸ್ತ್ರೀಜನಿತ ವಾಗದೆ ಆಯೋನಿಜವಾಗುವದು.

ಇದು ಅಲ್ಲದೆ ನಿನ್ನೊಡನೆ ನಿನ್ನ ಆತ್ಮಜಾಗ್ರತೆಗಾಗಿ ಭೂಲೋಕದಲ್ಲಿ ನನ್ನ ಮೂವರು ಶಿಷ್ಯರೊಡನೆ ನಾನು ಅವತರಿಸುವೆ .

ನಾನು ಬೆಳಗಾವಿ ಜಿಲ್ಹೆಯ ಮುರಗೋಡಿನಲ್ಲಿ ಕೆಂಗೇರಿ ಮಲ್ಹಾರ ದೀಕ್ಷಿತರ ಉದರದಲ್ಲಿ ಚಿದಂಬರನೆಂಬ ಹೆಸರಿನಿಂದಾ ಪ್ರಕಟವಾಗುವೆ.

ಭೃಂಗೀಶನು ನಾಗಲಿಂಗನೆಂಬ ಹೆಸರಿನಿಂದ ಧಾರವಾಡ ಜಿಲ್ಹೆಯ ನವಲಗುಂದ ಎಂಬ ಗ್ರಾಮದಲ್ಲಿ ಜನಿಸುವನು.

ಗಣಪತಿಯು ಬಾಣಾವರದಲ್ಲಿ ಸಿದ್ಧಿಮಲ್ಹಾರನೆಂಬ ಹೆಸರಿನಿಂದಾ ಪ್ರಕಟವಾಗುವನು ಇದು ಅಲ್ಲದೆ ನಂದೀಶನು ಹೊನಹಳ್ಳಿಯೆಂಬ ಗ್ರಾಮದಲ್ಲಿ ಘೋಧಿಶ್ವರನೆಂಬ ಹೆಸರಿನಿಂದಾ ಪ್ರಕಟವಾಗುವನು ಕಾರಣ ನೀನು ಯಾವ ರೀತಿಯಿಂದಲೂ ಚಿಂತಿಸದೆ ನನ್ನಾಜ್ಞೆಯಂತೆ ಭೂಲೋಕಕ್ಕೆ ಅವತರಿಸಲಿಕ್ಕೆ ಸಿದ್ಧನಾಗು ನಾನು ಪರಶಿವನ ಆಜ್ಞೆಯಿಂದಾ ಕೈಲಾಸದಲ್ಲಿಯ ಶಿವಪರಿ ವಾರವು ಭೂಮಿಗೆಅವತರಿಸಲು ಸಿದ್ಧವಾದಾಗ ಶಿವನ ಪ್ರಮಥಗಣಗಳು ಶಿವಲೀಲೆಯನ್ನು ಕೊಂಡಾಡಿ ಆನಂದದಿಂದಾ ಜಯಘೋಷಣವನ್ನು ಮಾಡುವರು. ಆದರೆ ಭೃಂಗೀಶ ವೀರೇಶರ ಅವತಾರವು ಜಗತ್ತಿಗೆ ಯಾವ ಸ್ವರೂಪವನ್ನು ಕೊಡುವದೆಂಬ ಭೀತಿಯಿಂದಲೋ, ಯಾವ ಉದ್ಧಾರ ಮಾಡುವದೆಂಬ ಸಂತೋಷದಿಂದಲೋ ಅವರ ಅವತಾರ ಕಾಲಕ್ಕೆ ಜಗವು ನಲಿದಾಡಿದಂತೆ ಭಾಸ ವಾಯಿತು.

ನಾಲ್ಕು ಜನ ಮಹಾತ್ಮರಾಗಿ ನಾಲ್ಕೂ ಮಂದಿ ದೇವಗಣಗಳಲ್ಲಿ ಭಟವ್ಯಾಪ ಹರಿದು ಭವಪಾಶದಿಂದ ದೂರಾಗಲು ಯತ್ನಿಸಿ ಅಖಂಡ ಬ್ರಹ್ಮ ಚರ್ಯ ವ್ರತದಿಂದ ಜಗತ್ತನ್ನು ಬೆಳಗಿದ ಮಹಾತ್ಮ ಶ್ರೀಪ್ಪರೆಂದರೆ ನಮ್ಮ

ಚರಿತ್ರನಾಯಕ ಮಡಿವಾಳ ಸ್ವಾಮಿಗಳು. ಇವರು ಭೂಮಿಗವತರಿಸುವಾಗ ಜಗವು ಉತ್ಸಾಹಭರಿತವಾಗಿತ್ತೆಂಬದರಲ್ಲಿ ಸಂಶಯವಿಲ್ಲಾ. ಹಿಂದೆ ಕೈಲಾಸ ಶಂಕರನ ಸಭೆಯಲ್ಲಿ ವೀರೇಶನಿಗೆ ವಚನವಿತ್ತಂತೆ ಪರಶಿವನು ವೀರಭದ್ರ ದೇವರ ಅಯೋನಿಜಾವತಾರಕ್ಕಾಗಿ ತನ್ನ ಕಂಠಾಭರಣರನಾದ ಆದಿಶೇಷನನ್ನು ಕರೆದು ಹೀಗೆ ಆಜ್ಞಾಪಿಸಿದನು ಭೂಭಾರಾತ್ಮಜ ಶೇಷರಾಜನೇ ನಮ್ಮ ವೀರೇಶನ ಅವತಾರ ಕಾರ್ಯಕ್ಕೆ ನಿನ್ನ ಸಹಾಯ ಬೇಕಾಗಿದೆ ಕಾರಣ ನೀನು ಈ ವೀರಭದ್ರನ ಬಾಲರೂಪವನ್ನು ವಯ್ದು ಕಿತ್ತೂರ ಕಲ್ಮಠದ ಹೂದೋಟದಲ್ಲಿ ಇಟ್ಟು ಬಾ. ಹೋಗು ದಕ್ಷಾರಿ ಶೇಷನ ಹೆಡೆಯನ್ನು ಅಲಂಕರಿಸು ಎಂದು ಆಜ್ಞಾಪಿಸಿದನು. ಪರಶಿವನ ಆಜ್ಞೆಯಿಂದಾ ದಕ್ಷಾರಿಯಿಂದಾ ಭೂಷಣನಾದ ಆದಿಶೇಷನು ಜಗದ ಕೈಲಾಸಕ್ಕೆ ಸಮಾನವಾದ ಕರ್ನಾಟಕ ಮಾತೆಯ ಶಿರೋ ಭೂಷಣವಾದ ಕಿತ್ತೂರ ಸಂಸ್ಥಾನದ ರಾಜಗುರುವೆನಿಸಿದ ಪ್ರಭುವರನ ಹೂದೋಟಕ್ಕೆ ಸಾಗಿದನು.

## ಬಾಲ್ಯ.

ಬಾಲರೂಪದಿ ತನ್ನ ತಂದೆಗೆ | ಲೀಲೆಗಳ ತೋರುತ ಮಡಿವಾಳ |
ಲೀಲೆಯಿಂದಲಿ ಮೆರೆದನಾ | ಕಿತ್ತೂರ ಕಲ್ಮಠದಿ ||

ಮಹಾತ್ಮರು ಉದಯಿಸುವಾಗ ಜಗವು ಆನಂದ ಭರಿತವಾಗುವದೆಂದು ತಿಳವಳಿಕೆಯಲ್ಲಿ ಇದೆ. ಅಂತೂ ಪರಮೇಶ್ವರನಿಂದಾ ಆಶ್ರಿತರಾದ ವೀರಭದ್ರ ಆದಿಶೇಷರು ಕೈಲಾಸದಿಂದಾ ಹೊರಟಿದ್ದನ್ನು ವಾಚಕರು ಮರೆಯಲಿಕ್ಕಿಲ್ಲ. ಇನ್ನು ತಪಸ್ಸುಮಾಡುತ್ತಿದ್ದ ಪ್ರಭುವರನ ಗತಿಯೆನಾಯಿತೋ ನೋಡುವಾ. ಶಿವಚಿಂತಾಮಗ್ನನಾದ ಪ್ರಭುವರನು ಪುತ್ರ ಲಾಭಕ್ಕಾಗಿ ಪರಶಿವನಲ್ಲಿ ಈಪರಿ ಮೊರೆಯಿಡುತ್ತಿದ್ದನು. ದೇವಾ ನೀನು ವಿಶ್ವಕುಟುಂಬಿಯಲ್ಲವೇ ? ವಿಶ್ವಧಾರಕನೆನಿಸಿಮೆರೆದ ನಿನಗೆ ನನ್ನ ಇಚ್ಛೆಯಂತೆ ಮಗುವನ್ನ ದಯಪಾಲಿಸುವುದು ಅಸಾಧ್ಯವೇ. ಶರಣಜನವತ್ಸಲನೆ! ಬೇಗ ನನ್ನ ವಾಂಛಿತನವನ್ನು ಪೂರ್ತಿಗೊಳಿಸು. ಇಂದು ಸೂರ್ಯೋದಯದ ಪೂರ್ವದಲ್ಲಿ ನನ್ನ ಇಚ್ಛೆಯ ಪೂರ್ತಿಯಾಗದಿದ್ದರೆ ನನ್ನ ಆತ್ಮಾರ್ಪಣೆಮಾಡಿ ಭವದುಃಖದಿಂದಾ ಪಾರಾಗುವೆ. ದೇವಾ ದಯಾಘನಾ ಭಕ್ತಮನೋವಾಂಛಿತ ಪೂರ್ಣಗೊಳಿಸುವೆ ಟೊಂಕ

ನೀನು ನನ್ನ ಇಚ್ಛೆಯಂತೆ ಅವರನ್ನು ಕರುಣಿಸು ನನ್ನ ಪುತ್ರ ವಾಂಛಿತ ತೃಶೆ ಯನ್ನು ನೀಗಿಸು ಎಂದು ಪರಮೇಶ್ವರನ ಸ್ತುತಿಯನ್ನೈದು ಶಾಂತರೀತಿ ಯಿಂದ ಪ್ರಭುವರನು ನಿದ್ರಾಸಕ್ತನಾದನು ಜಾಗ್ರತ ಸುಸುಕ್ತತೆಯಲ್ಲಿ ಒಂದೇ ಚಿಂತನೆಯಲ್ಲಿಯಿದ್ದ ಮಾನವನಿಗೆ ತನ್ನ ಬಾಹ್ಯ ಜಗತ್ತು ಶೂನ್ಯವಾಗು ವದು ಬ್ರಾಂತಭವದ ನೇಮಕ್ಕನುಸಾರವಾಗಿ ಪ್ರಭುವರನು ಒಂದು ಕನಸು ಕಂಡನು ಮಹಾದೇವನ ಚಿಂತನೆಯಲ್ಲಿ ಮುಳುಗಿದ ಪ್ರಭುವರನಿಗೆ ಅವನ ಚಿಂತನೆಯಲ್ಲದೆ ಮತ್ತಾವ ವಿಷಯವೂ ಕನಸಿನಲ್ಲಿ ಸುಳಿಯಲಿಲ್ಲ ತನ್ನ ಕನಸಿನಲ್ಲಿ ಕೈಲಾಸದ ಕಡೆಗೆ ಕೈಮಾಡಿ ಶಿವನಸ್ತುತಿಯನ್ನು ಮಾಡಲಾರಂಭಿ ಸಿದನು. ಆದೇನಂದರೆ ದೇವಾ ನನ್ನ ಮೇಲೆ ಕೃಪೆಮಾಡಲಾರೆಯಾ? ಇಗೋ ಇಂದು ನೀನು ನನಗೆ ಪರರ ರುಣಿಯೆನಿಸಿದರೆ ಒಳ್ಳೆಯದಾಯಿತು ಇಲ್ಲವಾದರೆ ಮಗುವಿನ ಚಿಂತನೆಯಿಂದಾ ನಾನು ಜರ್ಜರಿತವಾಗುತ್ತಿರುವ ಈ ದೇಹವನ್ನು ಭವದಿಂದಾಡಿ ದಾಟುವೆನು. ಇಂಥ ಪ್ರಭುವರನು ದೈನ್ಯದಿಂದಾ ಬೇಡಿ ಕೊಳ್ಳುವದನ್ನು ಕಂಡು ಪರಶಿವನು ಪ್ರಭುವರಾ ಚಿಂತಿಸಬೇಡ ನಿನ್ನ ಭಕ್ತಿಗೆ ನಾನುಮೆಚ್ಚಿರುವೆ ನಾಳಿನ ದಿವಸ ಸೂರ್ಯೋದಯವಾಗುವ ಮುಂಚೆ ನಿನ್ನ ಮಠದ ಹೂದೋಟದಲ್ಲಿ ನಿನ್ನ ಕಣ್ಣಿಗೆ ಬೀಳುವ ಕೂಸು ನಿನ್ನ ಮಠದ ಪಟ್ಟಕ್ಕೆ ಅಧಿಕಾರಿಯಾಗುವದು. ಚಿಂತಿಸಬೇಡಾ ಎಂದು ಹೇಳಿ ಅದೃಶ್ಯ ನಾದನು ಆಗ ಪ್ರಭುವರನು ಎಚ್ಚತ್ತು ತನ್ನ ಕನಸಿನ ನೆನಪು ಆಗಿ ಬೆಳಗಿನ ಜಾವದವರಿಗೆ ಅರನಿದ್ರೆಯಿಂದಾ ಹೊರಳಾಡಿದನು. ಇಂತು ಪ್ರಭುವರನು ಚಿಂತಾಮಗ್ನನಾಗಿ ಅರನಿದ್ರೆಯಲ್ಲಿ ಹೊರಳಾಡುತ್ತಿರಲು. ಅವನ ಹೃದಯ ಭಾವವನ್ನು ಜಗತ್ತಿಗೆ ತೋರುವದಕ್ಕಾಗಿಯೋ ಅಥವಾ ಜಗತ್ತಿನ ಮಹಾತ್ಮವ್ಯಕ್ತಿಯ ಬರುವ ಸೂಚನೆಯನ್ನು ತಿಳಿಸುವದಕ್ಕಾಗಿಯೋ ಕೋಳಿಗಳು ತಮ್ಮ ಮಂಜುಳ ನಾದದಿಂದಾ ಕುಕ್ಕೂ ಕೂ ಎಂದು ಕೂಗಿದವು. ತನ್ನ ಹೃದಯ ಪರಿವರ್ತನೆಯಿಲ್ಲದ್ದ ಪ್ರಭುವರನು ಆ ಕೋಳಿ ಗಳ ಕೂಗಿನಿಂದಾ ಎಚ್ಚತ್ತು ಕರ್ತವ್ಯದಕ್ಷನಾಗಿ ಜಗದಾದಿ ನಾರಾಯಣ ನಾದ ಸೂರ್ಯನು ಬರುವ ಪೂರ್ವದಲ್ಲಿ ಎದ್ದು ತನ್ನ ನಿತ್ಯಕರ್ಮವನ್ನು ತೀರಿಸಿಕೊಂಡು ಕನಸಿನ ವಿಷಯ ಚಿಂತನೆಯಿಂದಾ ಹೂದೋಟದ ಕಡೆ ಸಾಗಿದನು.

ಆ ಮಹಾತ್ಮಾ ಪ್ರಭುವರನು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಹೊರಡುವಕಾಲಕ್ಕೆ ಸಂಸ್ಥಾನಾಧಿಪತಿ ಮುಲಸರ್ಜ ದೊರೆಯು ಪ್ರಭುವರನ ದರ್ಶನಕ್ಕಾಗಿ ಆಕಸ್ಮಾತ ಆಗಮಿಸಿದನು. ಶಿಷ್ಯನ ಆಗಮನದಿಂದ ತನ್ನ ಹೃದಯ ಚಿಂತನೆಯಲ್ಲಿದ್ದ ಪ್ರಭುವರನು ಅವನ ಮುಂದೆ ತನ್ನ ಹೃದ್ಗತವನ್ನು ಬಿಚ್ಚಿಡಲು ಮನಸ್ಸಿನಲ್ಲಿ ಆಲೋಚಿಸಿದನು ಪ್ರತಿ ನಿತ್ಯದಂತೆ ಅವರೀರ್ವರೂ ಮಾತನಾಡುತ್ತಾ ಹೂದೋಟದ ಕಡೆ ಸಾಗಿದರು ಆಗ ಪ್ರಭುವರನು ತನ್ನ ಗತರಾತ್ರಿಯಲ್ಲಿ ಗತಿಸಿದ ಕನಸಿನ ಸಂಗತಿಯನ್ನು ಹೇಳುತ್ತ ಮುಂದೆ ಸಾಗಿದ್ದನು ಹೀಗೆ ಸಾಗಿದ ಆ ಗುರು ಶಿಷ್ಯರಲ್ಲಿ ದೈವೀ ಭಾವನೆ ಹುಟ್ಟಿ ಇಬ್ಬರೂ ಕನಸಿನ ವಿಷಯವನ್ನು ಏಕಾಗ್ರಚಿತ್ತದಿಂದ ವಿಚಾರಿಸುತ್ತ ಉಪವನದಲ್ಲಿ ಸಂಚರಿಸುವಾಗ ಆ ಬಾಳೆಯವನದಲ್ಲಿ ಶೇಷ ಫೂತ್ಕಾರವು ಕೇಳಲಾರಂಭಿಸಿತು ಜನಸಾಮಾನ್ಯರ ತಿಳಿವಳಿಕೆಯಲ್ಲಿ ಸರ್ಪಗಳು ಮಡ್ಡಿನ ಮೇಲಾಗಲಿ ಅಥವಾ ಯಾವದೇ ಒಂದು ಮೋಹಕ ವಸ್ತುವಿನ ಮೇಲಾಗಲಿ ಮತ್ತು ದೇವಾಂಶವಿದ್ದಲ್ಲಿ ಇರುತ್ತದೆ ಎಂದು ತಿಳವಳಿಕೆ ಇರುತ್ತದೆ ಅದಕ್ಕನುಗುಣವಾಗಿ ಸರ್ಪವನ್ನು ನೋಡಿದಾಕ್ಷಣವೇ ಇಲ್ಲಿ ಏನಾದರೊಂದು ಇರಲಿಕ್ಕೆ ಬೇರೊಂದು ಆ ಪ್ರಭುವರನಿಗೆ ಭಾಸವಾಯಿತು. ಭವ ಬಂಧಿತರಾದ ಆ ಗುರುಶಿಷ್ಯರಿಬ್ಬರೂ ಆ ಶೇಷನನ್ನು ಕಂಡು ನಡುಗಿದರು ಆಗ ಪ್ರಭುವರನು ಕ್ಷಣಕಾಲ ವಿಚಾರಿಸಿ ಗತರಾತ್ರಿಯ ಕನಸು ಲಕ್ಷಕ್ಕೆ ತಂದು ಶೇಷಫೂತ್ಕಾರ ಸೂಚನೆಯನ್ನು ತಿಳಿದು ಆನಂದಭರಿತನಾದನು. ಅದೇ ಆನಂದ ಭರದಲ್ಲಿ ಶೇಷನಿಗೆ ನಮಸ್ಕರಿಸಿ ಮುಂದೆ ಸಾಗಲು ಮೊದಲೇ ಪರಶಿವನ ಆಜ್ಞೆಯಿಂದಾ ನಿಯಮಿತನಾದ ಬಾಲ ವಿರೇಶನು ಪ್ರಭುವರನ ಆನಂದಸಂಧಿಯನ್ನು ಉಕ್ಕೇರಿಸುವ ಉದಯೋನ್ಮುಖ ಚಂದ್ರನಂತೆ ಕಂಡನು ನೋಡಿ ವಾಚಕರೇ ಸಕಲ ಭವವನ್ನು ತನ್ನ ರೋಷದಿಂದ ಸುಟ್ಟು ಸೂರೆಗೊಳಿಸುವ ದಕ್ಷಾರಿಯು ಭವ ನಿಯಮಕ್ಕನುಸಾರವಾಗಿ ಭಟ ಬಾಲಕನಂತೆ ಭವಕ್ಕಂಜಿ ಅಳಲಾರಂಭಿಸಿದನು ಪಾರ್ಕೃತ ಆತ್ಮ ಜನಕಾರಣವನು ಪ್ರಭು ನಿರ್ವಯ ನಿಲ್ಲುವನು ಜನಿಸಿ ಉರ್ವಿಗುಮಿವೆ ಮಹಾಳೇಶ್ವರನ ಬಾಲಕೃತಿಗಳ ಗಿರ್ವಾಣರೊಲಿದಾಲವುದು.

ಭವಕ್ಕಂಜಿ ಅತ್ತ ಆ ಬಾಲಕನನ್ನು ನೋಡಿ ಪ್ರಭುವರನ ಪುತ್ರ ಲಾಭದ ಹಿರಿದಾಶೆಯು ಹೆಗ್ಗುರಿಯು ಉಕ್ಕೇರಲಾರಂಭಿಸಿತು. ತಾನು ವಿರಕ್ತನಿದ್ದರೂ ತನ್ನ ಕನಸಿನ ಪರಿವರ್ತನೆಯ ಹೃದಯಾಘಾತದ ಮೂಲಕ ಮಗುವಿನ ಮೋಹಕ್ಕೆ ಬಿದ್ದು ಪ್ರಾಪಂಚಿಕರಂತೆ ಮಗುವನ್ನು ಎತ್ತಿ ಮುದ್ದಾಡಿದನು. ಆ ಮಗುವಿನ ಮುಖವು ಪೌರ್ಣಿಮೆಯ ಚಂದ್ರಮನಂತೆ ಉಲ್ಲಾಸದಿಂದ ತುಂಬಿ ತುಳುಕುತ್ತಿತ್ತು. ತನ್ನ ಪ್ರಭಾವದಿಂದ ಪ್ರಭುವರನಿಗೆ ಮನದಾನಂದವನ್ನುಂಟು ಮಾಡಿತು. ಈ ಪರಿ ಪ್ರಭುವರನ ಮನದಾನಂದ ಕಾರಣಿಯಾದ ಆ ಪಾರ್ವತೀಸುತ ಬಾಲರೂಪ ವೀರೇಶನು ತನ್ನ ಜನನಕ್ಕಾಗಿ ಹಂಬಲಿಸಿದ ತನ್ನ ಗುರುವಿಗೆ ಮಗನಂತೆ ಭಾಸವಾದನು.

ಇಂತು ಪ್ರಭುವರ ಹಸ್ತಗತವಾದ ಶಿಶುವನ್ನು ಗುರುಶಿಷ್ಯರಿಬ್ಬರೂ ಎತ್ತಿ ಮುದ್ದಾಡಿ ಆನಂದದಿಂದ ನಲಿದಾಡುತ್ತ ತಮ್ಮ ಮಠಕ್ಕೆ ಬಂದರು. ಆಗ ಪ್ರಭುವರರು ತಮ್ಮ ಮಠಾಶ್ರಿತರಾದ ವಿದ್ವಾನ ವಿರುಪಾಕ್ಷ ಪಂಡಿತರ ಸತಿ ಶಿರೋಮಣಿಯಾದ ನಾಗಲಾಂಬಿಕೆಯ ಕೈಯಲ್ಲಿ ಕೊಟ್ಟರು. ಹುಟ್ಟು ಬಂಜೆಗೆ ಎರಡನೇಯವರ ಮಕ್ಕಳಲ್ಲಿ ಪ್ರೀತಿ ಹೆಚ್ಚು. ಅದರಂತೆ ಮಕ್ಕಳಿಲ್ಲದ ಆ ನಾಗಲಾಂಬಿಕೆಯು ಆ ಕೂಸನ್ನು ಅತಿ ಪ್ರೇಮದಿಂದ ಜೋಕೆ ಮಾಡಲಾರಂಭಿಸಿದಳು. ತನ್ನ ತಪಸ್ಸಿನ ಫಲಸ್ವರೂಪಿ ಆ ಬಾಲಕುವರನಿಗೆ ತನ್ನ ಮಠದ ಆದ್ಯ ಗುರುವಾದ ಶ್ರೀಗುರು ಮುದಿ ಮಡಿವಾಳೇಶ್ವರನ ನಾಮವನ್ನು ಆ ಪ್ರಭುವರನು ಪ್ರೇಮದಿಂದ ಕರೆಯಲಾರಂಭಿಸಿದನು. ಆ ಬಾಲ ಮಡಿವಾಳೇಶ್ವರನು ದಿನದಿನಕ್ಕೆ ಪೌರ್ಣಿಮೆಯ ಚಂದ್ರನಂತೆ ತನ್ನ ಗುರು ಸ್ವರೂಪಿಯಾದ ಇಚ್ಛಿತಪಿತನಿಗೂ ತನ್ನ ಸಾಕು ತಾಯಿಯಾದ ನಾಗಲಾಂಬಿಕೆಗೂ ಬಾಲ ಲೀಲೆಯನ್ನು ತೋರಲಾರಂಭಿಸಿದನು.

ಯಾವ ಪ್ರಭುವರನು ತನ್ನ ಲೀಲಾ ಮಂತ್ರದಿಂದ ಜಗದ ಜಟ್ಟಿಗಳ ಹೃದಯವನ್ನು ಭೇದಿಸಲು ಶಕ್ತನಾಗಿರುವನೋ ಅಂಥ ಶಿವಸುತನು ಭವದ ನಿಯಮಕ್ಕನುಸಾರವಾಗಿ ಭವಪಿತ ಮಾತೆಯರಿಗೆ ಅಂಜಿ ನಡೆಯಬೇಕಾಯಿತು. ಯಾವ ಪರಮಾತ್ಮನು ಜಗತ್ತಿನ ಪ್ರಳಯ ಕಾಲದ ಆಟವನ್ನು ಲೀಲೆಯಿಂದಾಡುತ್ತಿದ್ದನೋ ಅಂಥವನು ಭವಬಾಲಕರಲ್ಲಿ ಬೆರೆತು ಆಡಲಾರಂಭಿಸಿದನು. ನೋಡಿ ! ಮಹಾಶಯರೇ ಎಂಥ ದೈವೀ ಪುರುಷನಿದ್ದರೂ

ಭವದಲ್ಲಿ ಬಂದ ಮೇಲೆ ಭವನಿಯಮ ಬದ್ಧನಾಗಬೇಕಾಗುತ್ತದೆ. ಆದರಂತೆ ನಮ್ಮ ಕಥಾನಾಯಕರಾದ ಶ್ರೀಗುರು ಮಡಿವಾಳಸ್ವಾಮಿಗಳವರು ತಮ್ಮ ಪ್ರಭುವರರಿಗೆ ಆಜ್ಞಾಧಾರಕರಾಗಿಯೂ ನಾಗಲಾಂಬಿಕೆ ವಿರುಪಾಕ್ಷರಿಗೆ ವಿಧೇಯರಾಗಿಯೂ ನಡೆಯಬೇಕಾಯಿತು.

ಒಂದು ದಿನ ಮಕ್ಕಳೊಡನೆ ಆಟವಾಡುತ್ತಿದ್ದ ಚಿಕ್ಕ ಮಡಿವಾಳನು ಆಟದಲ್ಲಿ ಬಡಿದಾಟ ಬಂದು ಒಬ್ಬ ಹುಡುಗನನ್ನು ಹೊಡೆದನು. ಅವರ ಮನೆಯವರಿಗೆ ಸುದ್ದಿ ಹತ್ತಲು ನಾಗಲಾಂಬಿಕೆಯವರಿಗೆ ಫಿರ್ಯಾದೆ ಬಂದಿತು ಆಗ ಅವಳು ಬಾಲಾ ಮಡಿವಾಳಪ್ಪಾ ಈ ವ್ಯಾಜ್ಯವು ಮಠನಿವಾಸಿಗಳಾದ ನಮಗೆ ಸಲ್ಲತಕ್ಕದ್ದಲ್ಲ" ಎಂದು ಬೆದರಿಸಬೇಕೆನ್ನುವಷ್ಟರಲ್ಲಿ ಮಡಿವಾಳನು ಕೈಗೆ ಸಿಗದೆ ಓಡಿ ಹೋಗಿ ಒಂದು ಭಾವಿಯಲ್ಲಿ ಹಾರಿಕೊಂಡನು. ಆಗ ನಾಗಲಾಂಬೆಯು ತನ್ನ ವರ್ತನೆಯ ಬಗ್ಗೆ ಪ್ರಾಯಶ್ಚಿತ್ತ ಹೊಂದಿ ಪ್ರಭುವಿಗೆ ನಡೆದ ಸಂಗತಿಯನ್ನು ತಿಳಿಸಿದಳು ಆಗ ಪ್ರಭುವರನು ಘಾಬರಿಯಾಗಿ ಹುಡುಕಲು ಒಂದು ಓಣಿಯಲ್ಲಿ ಬಾಲಕರೊಡನೆ ಆಟವಾಡುತ್ತಿದ್ದನು ಈ ಪರಿ ಒಂದಿಲ್ಲೊಂದು ಲೀಲೆಯಿಂದಾ ಜನರ ಮುದ್ದು ಕುಮಾರನಾಗಿ ಅ ಬಾಲ ಮಡಿವಾಳನು ಕಿತ್ತೂರಲ್ಲಿ ಲೀಲೆಗಳನ್ನು ತೋರಹತ್ತಿದನು ಭವದ ಲೀಲಾ ಪಾತ್ರಕ್ಕೆ ಮಹಾತ್ಮರು ಭವದ ಮಾನವರಂತೆ ಕಾಣುವದು ಸಹಜ.

ಧೀರ ಮಡಿವಳ ವಿದ್ಯೆ ಕಲಿಯುತೆ |
ಧಾರುಣೀತಲದೊಳಗೆ ತನ್ನಯ |
ಪಾರ ವಿದ್ಯೆಯ ಮಹಿಮೆನಾದ ಸಾರ ಗುರುದಯದಿ ||

ಪಾಪದ ವಿಶ್ವ ಜಗತ್ತಿನಲ್ಲಿ ಮಾನವ ಜನ್ಮಧಾರಣ ಮಾಡಿದ ಮಹಾತ್ಮರು ಸಹ ಮಾನವ ಜನಸಂಪರ್ಕದಿಂದ ಮಾನವನಂತೆ ನಟಿಸ ಹತ್ತುವರು.

ನಾನೊಂದು ನುಡಿದರೆ ತಾವೊಂದು ನುಡಿಯುವರು. ತಾವೊಂದು ನುಡಿದರೆ ನಾನೊಂದು ನುಡಿಯುವೆನು. ಇದು ಕಾರಣ ಅವರಿಗೆ ನಮಗೆ ಮೇಳವಿಲ್ಲಾ.

ಎಂಬ ಉಕ್ತಿಯಂತೆ ಪರಶಿವನ ನೆಲೆಯು ತಿಳಿಯದ ಮೂರ್ಖರಿಗೆ ಮಹಾತ್ಮರ ನೆಲೆಯು ಹೇಗೆ ತಿಳಿಯುವದು ? ಭಗವಂತನು ನೀಚರಿಗೆ ನೀಚರಂತೆಯೂ ಸುಜನರಿಗೆ ಸುಜನನಾಗಿಯೂ ತೋರುವದು ಸಹಜ ಕಾರಣ ತಿಳಿದವರು ಭಾವದಂತೆ ಭಕ್ತಿ ಜತಿಯಂತೆ ಮತಿಯೆಂದು ಹೇಳುವರು

ತನ್ನ ಮನೋಭಾವನೆಯೋ ಮಾನವನಿಗೆ ಪರಮಾತ್ಮ ರೂಪಿ ಸಾಕ್ಷಾತ್ಕಾರ. ಮಾನವನ ಆತ್ಮಸಾಕ್ಷಾತ್ಕಾರವೇಅವನ ತಪಃಫಲವು. ಸತ್ಯಯು ತರು ನಡೆ ನುಡಿ ಏಕಮಾತ್ರ. ಮಹಾತ್ಮರಿಗೆ ಸರ್ವವೂಸಾಧ್ಯ ಮಾನವನು ಭವದಸುಖ ದುಃಖಗಳನ್ನು ಭಾವನಾಮಾತ್ರದಿಂದ ಅನುಭವಿಸುವನು. ಸುಖದುಃಖಗಳಲ್ಲಿ ಸಮತ್ವಭಾವನೆಯನ್ನು ತಳೆದ ಮಾನವನು ಮಹಾತ್ಮನಾಗುವದು ಸಹಜ. ಇಂತು ಭವಲೀಲೆಯಲ್ಲಿ ಬೆರೆತ ಮಹಾತ್ಮಾಮುಡಿವಾಳೇಶ್ವರರು. ತಮ್ಮ ಲೀಲೆ ಯಿಂದಾ ಬಾಲ್ಯವನ್ನುಕಳೆದು ಯೌವನದಲ್ಲಿ ಕಾಲಿಟ್ಟರು. ಆಗಿನ ಕಾಲಕ್ಕೆ ಅವರಮಠವಾಸಿಗಳು ಮತ್ತು ಅವರ ಸಾಕುತಾಯಿಯ ಪತಿಗಳಾದ ವಿರುಪಾಕ್ಷ ಪಂಡಿತರಲ್ಲಿ ವಿದ್ಯೆಕಲಿಯಲಾರಂಭಿಸಿದರು. ಆಗ ಅವರ ಸಹ ಪಾಠಿಗಳೆಂದರೆ ಮುಲಸರ್ಜ ದೊರೆಗಳ ಯುವರಾಜ ಬಾಪುರಾಜರು. ಮಲ್ಲಪ್ಪನೆಂಬ ಆಲೂರ ಶೆಟ್ಟಿಯ ಮಗನು. ಮತ್ತು ವಿರುಪಾಕ್ಷನೆಂಬ ಅಮಠವಾಸಿ. ಈ ಮೂವರು ಮುಡಿವಾಳ ಶಿವಯೋಗಿಗಳ ಕೂಡ ಕಲಿಯುವಾಗ ಸ್ವಾಮಿಗಳವರ ಬುದ್ಧಿ ಚಾತುರ್ಯಕ್ಕೆ ಗುರುಗಳಿಂದ ಹೊಗಳಿಸಿಕೊಳ್ಳುವದನ್ನು ಕಂಡು ಈ ಸಹ ಪಾಠಿ ತ್ರಯಗಳು ಅಸೂಯೆ ಪಡಲಾರಂಭಿಸಿತು. ನೋಡಿ ಮಹಾನುಭಾವರೇ! ಸಾಕ್ಷಾತ್ ಶಿವಸುತನ ವಿದ್ಯೆಗೂ ನರದೇಹ ಧಾರಿಗಳಾದ ಇವರ ವಿದ್ಯೆಗೂ ಹೆಚ್ಚು ಕಡಿಮೆಯಾಗುವದರಲ್ಲಿ ಸಂದೇಹವೇನು ? ಹುಲಿಯು ಬಣ್ಣಕ್ಕೆ ನರಿಯು ಮೈ ಸುಟ್ಟುಕೊಂಡಂತೆ ಭವಪಾಶಾತೀತರಾದ ಮಹಾಸಾಧುಗಳ ವಿದ್ಯೆಗೆ ಭವಬಂಧ ಮಾನವನ ವಿದ್ಯೆಯು ಸರಿಯಾದೀತೇ? ಪ್ರತಿನಿತ್ಯ ಸ್ವಾಮಿ ಯವರನ್ನು ಗುರುಗಳು ಶ್ಲಾಘಿಸುತ್ತಿದ್ದರು. ಬಾಪುರಾಜನನ್ನು ತಿರಸ್ಕರಿ ಸುತ್ತಿದ್ದಂತೆ ಇದೇ ಶ್ಲಾಘನೆ ತಿರಸ್ಕಾರಗಳು. ಮುಂದೆ ಶ್ರೀಗಳು ಮುಡಿ ವಾಳೇಶ್ವರರೊಡನೆ ಉದಯಿಸುವ ವಿಷ ವೃಕ್ಷಕ್ಕೆ ಬೀಜಾಂಕುರವಾಯಿತು.

ಆ ಬಾಪುರಾಜನಿಗೆ ಮಹಾಭಾರತ ಕಾಲದಲ್ಲಿ ದುರ್ಯೋಧನನಿಗೆ ಶಕುನಿ ದುಃಶ್ಯಾಸನರಂತೆ ಮಲ್ಲಪ್ಪಶೆಟ್ಟಿ, ವಿರುಪಾಕ್ಷ ಶರಣರು ಕೂಡಿದ್ದರು. ಅವರ ದುರುಪದೇಶದಿಂದಾ ಬಾಪುವು ಗುರುವೈರತ್ವವನ್ನು ದಿನೇ ದಿನೇ ಹೆಚ್ಚಾಗಿ ಮಾಡಲಾರಂಭಿಸಿದನು. ಪ್ರತಿನಿತ್ಯ ರಾಜವಾಡೆಯಲ್ಲಿ ಸಹ ಪಂಕ್ತಿ ಭೋಜನಕ್ಕೆ ಬರುತ್ತಿದ್ದ, ಪ್ರಭುವರನ ಕೂಡ ಬರುತ್ತಿದ್ದ ಬಾಲ ಮುಡಿವಾಳೇ ಶ್ವರರ ಸಹಕಾರವು ಬಾಪುರಾಜನಿಗೆ ಸೇರದಾಯಿತು. ಒಂದು ದಿನ ಬಾಪು

ರಾಜನಿಗೂ ಗುರುವಿಗೂ ಶ್ಯಾಲೆಯಲ್ಲಿ ಜಗಳವಾಯಿತು. ಆಗ ಬಾಪುರಾಜನು ಗುರುವಿಗಿಂತ ಮೊದಲಾಗಿ ಮನೆಗೆ ಬಂದು ಮಡಿವಾಳೇಶ್ವರರು ಒಳಗೆ ಬರದಂತೆ ಕೋಟೆಯ ಬಾಗಿಲು ಹಾಕಿಸಿದನು. ತಮ್ಮ ತಂದೆಯೊಡನೆ ಪ್ರತಿ ನಿತ್ಯದಂತೆ ಊಟಕ್ಕೆ ಹೋಗುವ ಮಡಿವಾಳೇಶ್ವರರಿಗೆ ಕೋಟೆಯ ಬಾಗಿಲಿಗೆ ಬಂದ ಕೂಡಲೇ ಬಾಗಿಲು ಹಾಕಿದ್ದು ಕಾಣಿಸಿತು. ಇತ್ತ ರಾಜಮಂದಿರದಲ್ಲಿ ಭೋಜನಕ್ಕೆ ಸಿದ್ಧರಾದ ಪ್ರಭುಸ್ವಾಮಿಗಳು ಮಗನ ಆಗಮನ ನಿರೀಕ್ಷಣೆ ಮಾಡಹತ್ತಿದರು. ಸ್ವಲ್ಪ ಹೊತ್ತಿನ ನಂತರ ಒಳಗಿದ್ದ ಪ್ರಭುವರನಿಗೆ ಹೊರಗಿನಿಂದಾ ಬಾಲ ಮಡಿವಾಳೇಶ್ವರರ ಕೂಗು ಕೇಳಿಸಿತು. ಹೊರಗೆ ಬಂದು ನೋಡುತ್ತಾರೆ ಮಡಿವಾಳೇಶ್ವರರೊಬ್ಬರೇ ನಿಂತಿದ್ದರು. ಆಗ ಅವರು ಏಕೆ ಮಡಿವಾಳಾ ಊಟಕ್ಕೆ ಬರುವದಿಲ್ಲನೇ? ಎಂದು ಪ್ರಶ್ನೆ ಮಾಡಿದಾಗ ಸ್ವಾಮಿಯವರು "ತಾತಾ ನಾನು ಒಳಗೆ ಬರಬಾರದೆಂದು ಬಾಪುರಾಜನು ಕೋಟೆಯ ಬಾಗಿಲವನ್ನು ಹಾಕಿಸಿದ್ದಾನೆ. ಕಾರಣ ನಾನು ಒಳಗೆ ಬರುವದಿಲ್ಲ ಇನ್ನು ಮೇಲೆ ಈ ಕಿತ್ತೂರ ರಾಜವಾಡೆಯಲ್ಲಿ ಕಾಲಿಡುವದಿಲ್ಲ. ಬೇಕಾದರೆ ನೀವೇ ಊಟಮಾಡಿ ಹಿಂದಿನಿಂದಾ ಬನ್ನಿ. ಎಂದು ಹೇಳಿ ಕಲ್ಮಠದ ಹಾದೀ ಹಿಡಿದರು. ಯಾವದೂ ಅರಿಯದೆ ಅಕಸ್ಮಾತ್ತಾಗಿ ಘಟಿಸಿದ ಈ ಪ್ರಸಂಗವನ್ನು ಕಂಡು ಪ್ರಭುವರನು ಆಶ್ಚರ್ಯ ಚಕಿತನಾಗಿ ಮಗುವಿನ ಮನದಿಂಗಿತವನ್ನು ತಿಳಿಯಲು ಹಸುವಿಗೆ ಹಾರೈಸಿದ ಧೇನುವಿನಂತೆ ಭೋಜನ ತೊರೆದು ಬಾಲ ಮಡಿವಾಳೇಶ್ವರರನುಸಾರಿಣಿಯಾಗಿ ಕಲ್ಮಠಕ್ಕೆ ತೆರಳಿದರು.

ಹೀಗೆ ಕೋಪಾವಿಷ್ಟನಾದ ಗುರುವಿನ ಚರಣವನ್ನು ಹಿಡಿದು ಮಲ್ಲಸರ್ಜನು ಗುರುವಿನಲ್ಲಿ ಕ್ಷಮೆಬೇಡಿದನು. ಆಗ ಗುರುವು ರಾಜೇಂದ್ರ ನೀನು ಏನು ಹೇಳಿದರೂ ನಾನು ಇನ್ನು ಇಲ್ಲಿ ನಿಲ್ಲಲಾರೆ. ಎಲ್ಲಿಯವರೆಗೆ ನಿನ್ನ ರಾಜವಾಡೆಯಲ್ಲಿ ನಾನು ಊಟ ಮಾಡಬೇಕೆಂದು ಈಶ್ವರೀ ಸಂಕೇತವಿತ್ತೋ ಅಲ್ಲಿಯವರೆಗೆ ಆಯಿತು. ಇಂದಿಗೆ ಕಿತ್ತೂರ ರಾಜವಾಡೆಯ ಪುಣ್ಯ ಮುಗಿದಂತಾಯಿತು. ಮಲ್ಲಸರ್ಜ ನನ್ನನ್ನು ಇನ್ನು ತಡೆಯಬೇಡಾ ನಿನ್ನ ಅವನತಿಯ ಕಾಲ ಬಂದಿತೆಂದೇ ನಿನ್ನ ಮಗನಲ್ಲಿ ನಿರಕ್ತ ವೈರ ಉತ್ಪನ್ನವಾಯಿತು. ಬದ್ಧ ಕರ್ಮಾನುಸಾರಣೆಯಂತೆ ಕಾಲಕ್ಕೆ ಸರಿಯಾಗಿ ವಾಪಸನಿಗೆ

ಬುದ್ಧಿಯು ಹುಟ್ಟುವದು ಸಹಜ ಆಗುಹೋಗುಗಳನ್ನು ಕಂಡವರಾರು ನಾನಿನ್ನು ಬರುತ್ತೇನೆ ಎಂದು ಹೇಳಿ ಪ್ರಭುಸ್ವಾಮಿಗಳು ರಾಜವಾಡೆಯನ್ನು ಬಿಟ್ಟು ಕಲ್ಮಠದ ದಾರೀ ಹಿಡಿದರು.

ವಿರಕ್ತಕೋಪ ಭಾವನೆಯಿಂದ ಜರ್ಜರಿತನಾದ ಮಲಸರ್ಜ ದೊರೆಯು ತನ್ನ ಆತ್ಮ ಶಾಂತಿ ಹೊಂದಲು ಅಶಕ್ತನಾದನು. ಗುರುವೈರ ವಿಷಭಾವನೆಯು ಮನಸ್ಸಿನ ಮಗನಿಗಾಗಿ ಚಿಂತಿಸಿದನು. ಆದರೆ ನಿರುಪಾಯನಾದನು. ತನ್ನ ಆತ್ಮ ಶಾಂತಿಪಡೆಯಲು ಗುರು ಮುಖೋಪದೇಶವೇ ಯೋಗ್ಯವೆಂದು ಗುರುದರ್ಶನಕ್ಕಾಗಿ ಭೋಜನ ಬಿಟ್ಟು ಗುರುವಿನ ಹಿಂದೆ ಧಾವಿಸಿದನು. ನೋಡಿ ವಾಚಕರೇ ಸದಾ ಗುರು-ಶಿಷ್ಯ-ಸ್ನೇಹ ಸಂಬಂಧಿತರಾದ ಆ ಗುರು ಶಿಷ್ಯರ ಅಕಸ್ಮಾತ ಅಗಲುವಿಕೆಯು ಪ್ರಮಾದವೆಂದೇ ಹೇಳಬೇಕು. ಯಾಕಂದರೆ ಯಾವದನ್ನೂ ಅರಿಯದ ಅವರು ಅಕಸ್ಮಾತ ಅಗಲಿದ್ದು ಪ್ರಮಾದ ವಲ್ಲದೆ ಮತ್ತೇನು ಮಗನ ಕಾರ್ಯಕ್ಕೆ ತಾದೆಗೆ ಈ ಪರಿಕಷ್ಟ ಇದೇ ಈ ಅಗಲುವಿಕೆಗೆ ಕಾರಣ ಇಂತು ಮನಸ್ಸಿನ ಸಂತಾಪದಿಂದ ಕಳವಳಗೊಂಡ ಮಲಸರ್ಜ ಪ್ರಭುವರನು ತನ್ನ ಆತ್ಮ ಶಾಂತಿಯನ್ನು ಪಡೆಯಲು, ಗುರುಜ್ಞಾನಾಮೃತ ಭೋಧನೆಗಾಗಿ ತನ್ನ ಗುರುವರ ಕಲ್ಮಠಾದೀಶ ಪ್ರಭುವಿನ ಸನ್ನಿಧಿಗೆ ಧಾವಿಸಿದನು. ಗುರುವರನು ಮಲಸರ್ಜ ದೊರೆಯನ್ನು ಗರ್ಜಿಸಿ ಬಂದಿದ್ದರೂ ಯಾವದೂ ಅಪರಾಧವಿಲ್ಲದ ಶಿಷ್ಯನ ಮೇಲೆ ಕೋಪಿಸಿದ್ದಕ್ಕಾಗಿ ಮನಸ್ಸಿನ ಸಂತಾಪದಿಂದ ತನ್ನಲ್ಲಿ ತಾನೇ ಕಳವಳಗೊಂಡಿದ್ದನು. ಈ ಪರಿ ಹೃದಯ ಕಳವಳಿತನಾದ ಪ್ರಭುವು ತನ್ನ ಶಿಷ್ಯನ ಕ್ಷೇಮಕ್ಕಾಗಿ ಚಿಂತಿಸುತ್ತಿರಲು ಮಲಸರ್ಜ ದೊರೆಯು ಮಠಕ್ಕೆ ಬಂದರು ಈ ಪರಿ ನಿರ್ಮಲಭಾವದ ಶಿಷ್ಯನ ಆಗಮನವನ್ನುಕಂಡು ಶಿಷ್ಯನಲ್ಲಿ ದಯುಹುಟ್ಟಿ ಆ ಪ್ರಭುವರನು ತನ್ನ ಶಿಷ್ಯನೊಡನೆ ತನ್ನ ಮಠದಲ್ಲಿ ಸಹ ಪಂಕ್ತಿ ಭೋಜನ ಇಚ್ಛಿಸಿದನು. ಇಂತು ಗುರುವಿನ ಇಚ್ಛೆಯಂತೆ ಮಠದಲ್ಲಿ ಭೊಜನದ ಎರ್ಪಾಡು ಆಯಿತು ತನ್ನ ಸಹ ಪಂಕ್ತಿ ಭೋಜನಕ್ಕಾಗಿ ಸಿದ್ದನಾದ ಪ್ರಭುವರನು ತನ್ನ ಕುಮಾರ ಮಡಿವಾಳನನ್ನು ರಾಜನೊಡನೆ ಭೊಜನಕ್ಕೆ ಕರೆದನು. ಯಾವ ಕಾರಣದಿಂದಲೋ ಮಹಾ ಗುರುವು ರಾಜನೆದುರಿನಲ್ಲಿ ನಿರಾಕರಿಸಿದನು. ಆ ಮಹಾರಾಜನ ಹೃದಯದಲ್ಲಿ ಕೊಲಾಹಲವನ್ನೆಬ್ಬಿಸಿದ್ದಲ್ಲದೆ ಪ್ರಭುವರನಿಗೂ ಕೂಡಾ ಆಶ್ಚರ್ಯ

ವಾಯಿತು. ನೋಡಿ ವಾಚಕರೇ ಮಹಾತ್ಮರ ಮನೋಯೋಗವು ಅಜ್ಞಾನಿ ಗಳಿಗೆ ಹೇಗೆ ತಿಳಿಯಬೇಕು. ಆಗ ಪ್ರಭುವು ಮಗು ಏಕೆ ಈಪರಿ ವರ್ತಿಸಿದಿ ಎಂದು ಕೇಳಿದಾಗ ಜನಕಾ ಇದು ನನ್ನಿಂದಾದ ಅಪಮಾನವಲ್ಲ ನನ್ನ ಅಂತರಾತ್ಮನಾದ ಶಿವರೂಪಿ ಪರಮಾತ್ಮ ಅರಸನ ಅವನತಿಯು ಎಂದು ದೈವಿ ವಾಣಿಯಿಂದ ಅವನು ಹೇಳಿದನು.- ಆಗ ಗುರುವು ಶಿಷ್ಯರಿಬ್ಬರಿಗೂ ಆ ಬಾಲ ಯೋಗಿಶ್ವರನ ವಾಕ್ಯವು ತಿಳಿಯಲಿಲ್ಲ. ಅದಕ್ಕೆ ಪ್ರಭುವರನು ಆ ಬಾಲಯೋ ಯನ್ನುಕುರಿತು ಈ ರೀತಿ ಪ್ರಶ್ನೆ ಮಾಡಿದನು. "ಬಾಲಾ ಪನೀ ಶಬ್ದದ ಅರ್ಥ ಆಗ ಆ ಯೋಗೀಶ್ವರನು ತಾತ ಗುರುದ್ರೋಹದ ಗುರಿಯನ್ನೇ ತನ್ನ ಜನ್ಮದ ಗುರಿಯಾಗಿ ಇಟ್ಟುಕೊಂಡ ಬಾಪುಪಿನಿಂದ ಸಂಸ್ಥಾನದ ಅವನತಿ ಯಾಗು ವದೆಂದು ನನ್ನ ಅಂತರಾತ್ಮನು ನುಡಿಯುವನು ಎಂದು ಉತ್ತರ. ಕೊಟ್ಟು ಆಲ್ಲಿಂದ ಹೊರಟು ಹೋದನು. ಅದನ್ನು ಕೇಳಿದ ಆ ಮಲಸರ್ಜನು ದುಃಖಸಾ ಗರದಲ್ಲಿ ಮುಳುಗಿ ಗದ್ಗದಿತ ಕಂಠದಿಂದ ಗುರು ಚರಣಕ್ಕೆ ನಮಸ್ಕರಿಸಿ ಬಾಲ ವಾಕ್ಯಕ್ಕೆ ಅಂಜಿ ತನ್ನ ಸಂಸ್ಥಾನದ ಉಳವಿಗಾಗಿ ಅಭಿಶಾಪ ಮುಖದ ಆಶೀ ರ್ವಾದಕ್ಕಾಗಿ ಗುರುವಿನಲ್ಲಿ ಬೇಡಿಕೊಂಡನು. ಈ ಪರಿ ಶರಣಾಗತನಾದ ಮಲಸರ್ಜ ಭೂವರನನ್ನು ಕಂಡು ಕರುಣೆಯಿಂದ ಪ್ರಭುವರನು ಭೂವರಾ, ಚಿಂತಿಸಬೇಡಾ ಕಾಲಕರ್ಮಕ್ಕೆ ಸರಿಯಾಗಿ ಗುರುವಿನ ಬಾಯಿಂದ ವಾಣಿ ಯನ್ನು ನುಡಿಸಿದನು. ನೀನು ಅದಕ್ಕಾಗಿ ಚಿಂತಿಸಬೇಡಾ ನಿನ್ನ ಸಂಸ್ಥಾ ನದ ಅವಸಾನ ಕಾಲವು ನಿನ್ನಿಂದಲೇ ಆಗುವದೆಂಬ ಭ್ರಮೆಯಿಂದ ಬಳಲ ಬೇಡ. ನೀನು ಪ್ರತಿಯೊಂದಕ್ಕೆ ಕಾರಣ ಮಾತ್ರ ಆದರೆ ಸಕಲ ಜಗತ್ತಿನ ಚರಾ ಚರ ವಸ್ತುಗಳ ಚಲನವಲನವೂ ಒಬ್ಬ ಜಗತ್ತಕರ್ತನ ಆಜ್ಞೆಯಿಂದ ಆಗುವದೇ ಹೊರ್ತು ಅನ್ಯರು ಇಲ್ಲಾ ಬಿಡು ಸಂಸ್ಥಾನ ಚಿಂತೆ ಬೇಡಾ ಎಂದು ಸಂತೈಸಿ ನಿಶ್ಚಿಂತನಾಗಿರಲು ಬೋಧಿಸಿದನು.

ನೋಡಿ ವಾಚಕರೇ ಜಗತ್ತಿನಲ್ಲಿ ಮಾನವನು ಯಾವದಾದರೊಂದು ಪ್ರೇಮಕ್ಕೆ ಬಾಧಿತನಾಗಿರಬೇಕು ಇವುಗಳಲ್ಲಿ ಅನೇಕ ತರಹಗಳುಂಟು.

ಇವುಗಳಲ್ಲಿ ಪ್ರಾಮುಖ್ಯವಾಗಿ ಸತಿಪತಿ ಪ್ರೇಮ ತಂದೆ ಮಕ್ಕಳ ಪ್ರೇಮ ಗುರು ಶಿಷ್ಯ ಪ್ರೇಮ ಈ ಪರಿಯಾಗಿ ಅನೇಕ ತರಹದ ಪ್ರೇಮ ಗಳುಂಟು ಇವುಗಳಲ್ಲಿ

ನಮ್ಮ ಚರಿತ್ರೆಯಲ್ಲಿ ನಡೆದಿರುವದು ಗುರು-ಶಿಷ್ಯ ಪ್ರೇಮ. ಇವರಲ್ಲಿ ಯಾವ ಸ್ವಾರ್ಥ ಸಾಧನೆಯಿರಲಾರದು ಯಾವಗಲೂ ಗುರುವಿನ ಸೇವಾ ವೃತ್ತಿಯಲ್ಲಿ ನಿರತನಾಗಿರುವದು ಶಿಷ್ಯನ ಕರ್ತವ್ಯ. ಶಿಷ್ಯನ ಪ್ರೇಮ ಚಿಂತನೆ ಮಾಡಿ ಅವನನ್ನು ಮುಮುಕ್ಷಮಾರ್ಗದ ಸೋಪಾನಕ್ಕೆ ಹಚ್ಚಿ ಅವನನ್ನು ಕೃತಾರ್ಥನನ್ನಾಗಿ ಮಾಡುವದು ಗುರುವಿನ ಕರ್ತವ್ಯ ಈ ರೀತಿ ಜಗನ್ನೀತಿ ಯಂತೆ ಶಿಷ್ಯನನ್ನು ಸಂತೈಸಿ ಕಳಿಸಿದ ಪ್ರಭುವರರು ತನ್ನ ಕುವರ ಮುಡಿವಾಳೇಶ್ವರನ ಬಾಲವಾಕ್ಯವನ್ನು ಚಿಂತಿಸಿ ವಿಚಾರಿಸಿ ಅದಕ್ಕೆ ತನ್ನ ಶಿಷ್ಯನ ಸಂಸ್ಥಾನ ನಾಶವನ್ನು ಹಚ್ಚಿ ತೂಗಿ ನೋಡಲು ಪ್ರಪಂಚದ ಭವಣೆಗೆ ಬಿದ್ದು ಜರ್ಜರಿತ ನಾದ ತನ್ನ ಶಿಷ್ಯನ ಪರಡಿಯು ತನ್ನ ಬಾಲನ ಬ್ರಹ್ಮ ಸಾಮರ್ಥ್ಯದ ಪರಡಿಗೆ ಗಗನ ಗೋಲಕ್ಕೆ ಮುಟ್ಟಿತು. ತನ್ನ ಗುರು ಶ್ರೀಗುರು ಮುದಿ ಮುಡಿವಾಳೇಶ್ವರರ ವರ ಪ್ರಸಾದ ರೂಪಿ ಸಂಸ್ಥಾನ ನಾಶಕ್ಕೆ ಪ್ರಭುವರನು ಚಿಂತಿಸಿದನು. ಆದರೆ ದೈವಗತಿಯ ಚಕ್ರಕ್ಕೆ ಶಾಂತಮನಸ್ಕನಾಗಿ ಹೃದಯದಲ್ಲಿ ಪರಿವರ್ತಿಸಿ ಶಾಂತಿ ಚಿತ್ತದಿಂದ ನಿದ್ರೆಹೋದನು. ನೋಡಿ ಮಹಾಶಯರೇ, ತಾನು ನೆಟ್ಟಗಿಡವು ಬೇರು ಸಹಿತ ಮುರಿದು ಬೀಳುವಾಗ ಎಂಥ ಯೋಗಿಗೂ ದುಃಖವಾಗದೇ ಇರಲಾರದು.

ಈರೀತಿ ಅಂದು ಘಟಿಸಿದ ವಿಚಿತ್ರ ಸಂಗತಿಯ ಚಿಂತನೆಯಿಂದ ತನ್ನ ಶಿಷ್ಯನ ಪ್ರೇಮಕ್ಕಾಗಿ ಅವನ ಸಂಸ್ಥಾನದ ಉಳಿವಿನ ಚಿಂತಿಸುತ್ತ ಆ ಪ್ರಭುವರನು ನಿದ್ರೆ ಹೋದನು. ಚಿಂತಾಗ್ನಿಯಿಂದ ಹೊತ್ತಿದ ಅವನ ಹೃದಯ ವೇದನೆಯು ಅಗ್ನಿಯು ಆ ಪ್ರಭುವನ್ನು ನಿದ್ರಾವಸ್ಥೆಯಲ್ಲಿಯೂ ಸುಡದೆ ಬಿಡಲಿಲ್ಲಾ. ಇಂತು ಚಿಂತೆಯಿಂದ ನಿದ್ರಾಸಕ್ತನಾದ ಆ ಪ್ರಭುವು ಗತಿಸಿ ಹೋದ ಕಥೆಯ ಚಿಂತನವನ್ನು ಜಾಗ್ರತೆಯಲ್ಲಿ ಯಲ್ಲದೆ ಸುಷುಪ್ತಿಯಲ್ಲಿ ಕನಸಿನ ರೂಪವನ್ನು ಕಂಡನು. ಚಿಂತಾಮಗ್ನನಾದ ಪ್ರಭುವು ತನ್ನ ಕನಸಿನ ತೆರೆಯ ಮರೆಯಲ್ಲಿ ಒಂದು ವ್ಯಕ್ತಿಯು ನಿಂತಿದ್ದನ್ನು ಕಂಡನು. ಆ ವ್ಯಕ್ತಿಯು ಪ್ರಭುವರಿಗೆ ಗುರುವರಾ ನೀನಿಷ್ಟೇಕೆ ಚಿಂತಿಸುವಿ ಭವದಲ್ಲಿ ಮಾನವನು ಸುಖದುಃಖ ಕಾಲದಲ್ಲಿಯೂ ಶಾಂತಮನಸ್ಕನಾಗಿರಬೇಕು. ಅವನಲ್ಲಿ ಸದಾ ಸಮತ್ವ ಭಾವನೆ ನೆಲೆಗೊಂಡಿರಬೇಕು. ಚಿಂತಿಸಿದರೆ ಪ್ರಯೋಜನವಿಲ್ಲ. ನೀನು ಈ ಮನಸ್ಸಿನಲ್ಲಿ ಚಿಂತಿಸುವ ವಿಷಯ ದೈವೀ

ಪ್ರೇರಣೆಯಿಂದ ಘಟಿಸಿರುವದೇ ಹೊರ್ತು ನಿನ್ನ ಇಚ್ಛೆಯಂತೆ ನಡೆಯಲು ಸಾಧ್ಯವಿಲ್ಲ. ನೀನು ವಿರಕ್ತನಿದ್ದು ಹೀಗೇಕೆ ಭ್ರಾಂತನಾಗುವಿ ನಿನ್ನ ಶಿಷ್ಯ ಪ್ರೇಮವು ಅಗಮ್ಯವೆಂಬುದನ್ನು ನಾನು ಬಲ್ಲೆ ಆದರೆ ಮಾನವನ ಆಗು ಹೋಗುಗಳಿಗೆ ಅಧಿಕಾರಸ್ಥನು ನೀನಲ್ಲ. ನಿನ್ನ ಶಿಷ್ಯನ ಸಂಸ್ಥಾನವು ಕಾಲಾಂ ಚಿತಕ್ಕೆ ನಿನ್ನ ಮತ್ತು ನಿನ್ನ ಶಿಷ್ಯನ ಮರಣಾನಂತರ ಪರರ ಆಧೀನವಾಗ್ಯ ವದು. ಇದು ಗುರು ದ್ರೋಹದ ಪಾಪಕ್ಕೆ ಪ್ರಾಯಶ್ಚಿತ್ ಇದಕ್ಕಾಗಿ ನೀನ್ಯ ಯಾವ ಪ್ರಯತ್ನ ಮಾಡಿದರೂ ಅದಕ್ಕೆ ಉಳವಿಲ್ಲ ಬಿಡು. ಅದರ ಚಿಂತೆ ನಿನಗೇಕೆ ನೀನು ಆ ವಿಷಯವಾಗಿ ನಿಶ್ಚಿಂತನಾಗಿರು ಎಂದು ಹೇಳಿ ಅದೃಶ್ಯ ನಾದನು. ಈರೀತಿ ಶಾಂತಮನಸ್ಸಿನಿಂದ ವಿಚಾರಿಸುತ್ತಾ ಪ್ರಭುವು ತನ್ನ ಗತರಾತ್ರಿಗಳೆದನು. ಸದಾ ತನ್ನ ಕರ್ತವ್ಯವನ್ನು ಮಾಡಲು ಉದಯಿಸುವ ಸೂರ್ಯನಾರಾಯಣನು ತನ್ನ ಹೊಂಬಣ್ಣದ ಕಿರಣಗಳನ್ನು ಭೂಮಿಯು ಮೇಲೆ ಕೆಡವಬೇಕೆಂಬ ಆಶೆಯಿಂದ ಅತಿ ಕಷ್ಟಬಟ್ಟು ತನ್ನ ಕಿರಣವನ್ನು ಭೂಮಿಯ ಮೇಲೆ ಕೆಡವಲು ಪ್ರಯತ್ನಿಸಿದನು. ಇಂತು ಸೂರ್ಯ ಪ್ರಕಾ ಶಕ್ಕೆ ಅನುವಾಗಲು ಪ್ರಭುವರನು ಎದ್ದು ಪ್ರಾತರ್ವಿಧಿಯನ್ನು ತೀರಿಸಿಕೊಂಡು ತನ್ನ ಶಿಷ್ಯನ ಹಾದಿಯನ್ನೇ ನೋಡುತ್ತಿದ್ದನು.

ನೋಡಿ ವಾಚಕರೇ ಮಾನವನಿಗೆ ಚಿಂತೆಯೇ ಮುಪ್ಪು ಸಂತೋಷವೇ ಯವ್ವನ ಎಂಬಂತೆ ಮನುಷ್ಯನು ಎಂಥ ಸಿರಿವಂತನಿದ್ದರೂ ಅವನಿಗೆ ಚಿಂತೆ ಯಿದ್ದರೆ ಅವನು ಸಂತೋಷವನ್ನು ಕಾಣುವದು ಅಶಕ್ಯ. ಅದರಂತೆ ನಮ್ಮ ಪ್ರಭುವರನ ಶಿಷ್ಯ ಮಲಸರ್ಜ ಭೂಪರನ ಗತಿ ಯಾಗಿತ್ತು. ಬಾಲ ಯೋಗಿಶ್ವರನು ಲೀಲಾಮಾತ್ರದಿಂದ ನುಡಿದ ವಾಕ್ಯವನ್ನು ಕೇಳಿ ತನ್ನ ಸಂಸ್ಥಾನ ಅವನತಿಯ ಚಿಂತೆಯಲ್ಲಿ ಮಗ್ನನಾಗಿ ತಾನು ಗತರಾತ್ರಿ ಗಳಿಸಿದ ಕನಸಿನ ವಿಷಯವನ್ನು ತಲೆಯಲ್ಲಿ ತೂಗಿ ನೋಡುತ್ತಾ ಚಿಂತಾಬ್ಧಿಯಲ್ಲಿ ಮುಳುಗಿ ತನ್ನ ಗುರುಸನ್ನಿಧಾನಕ್ಕೆ ಹೊರಟ ಅರಸನು ಕಲ್ಮಠವನ್ನು ತಲುಪಿ ದನು. ಅತ್ತ ಪ್ರಭುವರನು ಇವನ ಹಾದಿಯನ್ನೇ ನೋಡುತ್ತಿದ್ದನು. ಮಲಸರ್ಜನ ಪ್ರಭುವು ಚಿಂತಾಮಗ್ನತೆಯಿಂದ ಪ್ರಭುವಿಗೆ ನಮಸ್ಕರಿಸಿದನು. ಆಗ ಪ್ರಭುವು ಶಿಷ್ಯನನ್ನು ಆಶೀರ್ವದಿಸಿ ಕುಳಿತುಕೊಳ್ಳಲು ಹೇಳಿದನು. ಗುರು-ಶಿಷ್ಯರಿಬ್ಬರೂ ಕುಳಿತಮೇಲೆ ಮಲಸರ್ಜನು ಚಿಂತೆಯಿಂದ ತನ್ನ

ಮನದ ದುಗಡವನ್ನು ಹೋಗಲಾಡಿಸಿಕೊಳ್ಳುವದಕ್ಕಾಗಿ ಗತರಾತ್ರಿಯ ಕನಸನ್ನು ಗುರುವಿನ ಮುಂದೆ ಹೇಳಲಾರಂಭಿಸಿದನು. “ ಗುರುವೇ ಏನು ನನ್ನ ಈ ಭವಣೆ ಯಾವದೂ ಅಪರಾಧ ವಿಲ್ಲದ ನನ್ನಲ್ಲೇಕೆ. ಗುರುಕ್ಷೋಭೆ ನಿನ್ನಿನ ದಿವ್ಸ ನಾವು ಇಲ್ಲಿಂದ ಅಗಲಿದ ಮೇಲೆ ನಾನು ಶಿವಚಿಂತನೆಯಲ್ಲಿ ನಿದ್ರಿಸಿದಾಗ ನಾನೊಂದು ಕನಸು ಕಂಡೆ—

ಗುರುವರಾ ನಾನು ಇಲ್ಲಿಂದ ಹೊರಟು ಹೋದಮೇಲೆ ·ನಾನು ಕಂಡ ಕನಸಿನ ರೀತಿಯೀಪರಿಯದೆ ನಿಮ್ಮ ಉಪದೇಶಾಮೃತದಿಂದ ಚಿಂತಿಸುತ್ತ ಮಲಗಿದ ನಾನು ಒಂದು ಭಯಾನಕವಾದ ನಿಬಿಡಾರಣ್ಯವನ್ನು ನಿಮ್ಮೊಡನೆ ಸೇರಿದ್ದೆ. ನಾವಿಬ್ಬರೂ ಹೋಗುವಾಗ ನಮಗೊಬ್ಬ ಬಾಲ ಬ್ರಹ್ಮಚಾರಿಯು ಭೆಟ್ಟಿಯಾದನು. ಅವನನ್ನು ನೋಡಿದಾಕ್ಷಣವೇ ನಾನು ಸಾಷ್ಟಾಂಗ ನಮಸ್ಕರಿಸಿದೆ. ಆಗ ಆ ಬ್ರಹ್ಮಚಾರಿಯು ನನ್ನಮೇಲೆ ಕೋಪಗೊಂಡು ಮೂರ್ಖಾ ಗುರುದ್ರೋಹದ ಪಾಪ ಬೀಜಾಂಕುರದ ಮೂಲನಾದ ನಿನ್ನಂದವನ ಸ್ಪರ್ಶ ಮಾಡಿ ನನ್ನ ಪಾದ ಮಲಿನಮಾಡಬೇಡ ನಡೆ ದೂರಾಗು ಎಂದು ಗರ್ಜಿಸಿದನು. ಹೀಗೆ ಗರ್ಜಿಸಿದ ಆ ವಟುವಿಗೆ ನೀವು ಕ್ಷಮೆ ಯಾಚಿಸಲು ನಾವಿಬ್ಬರೂ ಅಲ್ಲಿಂದ ಪಾರಾಗಿ ಬಂದೆವು.

ಈ ರೀತಿ ಶಿಷ್ಯನು ಹೇಳಿದ ಕನಸಿನ ವಿಷಯವನ್ನೂ ಮತ್ತು ತನ್ನ ಕನಸಿನ ವಿಷಯವನ್ನೂ ಸಲ್ಪ ಮನಸ್ಸಿನಲ್ಲಿ ವಿಚಾರಿಸುತ್ತ ಕ್ಷಣಕಾಲ ಮೌನದಿಂದ ಇದ್ದನು. ನಂತರ ಅವನು ಅರಸನನ್ನು ಕುರಿತು ಭೂವದ ಚಿಂತಿಸಬೇಡ ಕಾಲಚಕ್ರದ ಗತಿಯನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ. ಕಾರಣ ನಿನ್ನ ಸಂಸ್ಥಾನ ನಾಶಕ್ಕಾಗಿ ಚಿಂತಿಸಬೇಡ ನೀನು ನಿಶ್ಚಿಂತನಾಗಿರು ಎಂದು ಸಮಾಧಾನ ಮಾಡಿ ಅವನೊಡನೆ ಬೇರೆ ವಿಷಯ ಚರ್ಚಿಸಲಾರಂಭಿಸಿದನು ಇಂತು ಗುರುಶಿಷ್ಯರಿಬ್ಬರೂ ಶಾಂತಿ ಪಡೆದು ಕಾಲ ಕಳೆಯಲಾರಂಭಿಸಿದರು.

---

# ೨ನೇ ಪ್ರಕರಣ

## ಪಟ್ಟಾಧಿಕಾರ

ಭರದಿ ಪಟ್ಟವನೇರುತಾ ಗುರು ।
ವರನು ತರುತಲಿ ದೇವ ಗಂಗಾ ।
ಪರಮ ಜಲವನು ನೀಡಿದನು ಶಾಪವನಿ ಬಾಪು ರಾಜಗೆ ॥

'ವಾಚಕರೇ ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಗುರು–ಶಿಷ್ಯರಿಬ್ಬರಲ್ಲಿ ಸಂಸ್ಥಾನದ ಚಿಂತೆಯು ಸದಾವ ಕಾಲದಲ್ಲಿಯೂ ಕಟಿಯುತ್ತಿತ್ತು. .ಕಟಿಯ ದೇನು ಮಾಡೀತು. ತನ್ನ ಗುರುವಿನ ಆಶೀರ್ವಾದ ಬಲದಿಂದ ಸ್ಥಾಪಿತವಾದ ಕಿತ್ತೂರ ಸಂಸ್ಥಾನವು ಭಾಪುರಾಜನ ಗುರುದ್ರೋಹವೆಂಬ ಕುಠಾರದಿಂದ ಬೇರು ಸಹಿತ ಕಡಿದು ಬೀಳುವದನ್ನು ನೋಡಿದರೆ ಯಾರು ಚಿಂತಿಸಲಿಕ್ಕಿಲ್ಲ? ಈ ರೀತಿ ಗುರು ಶಿಷ್ಯರು ಸದಾವ ಕಾಲದಲ್ಲಿಯೂ ಸಂಸ್ಥಾನ ಚಿಂತನದಲ್ಲಿಯೆ ಕಾಲಕಳೆಯುತ್ತಿರಲು ಕಾಲಚಕ್ರದ ಸೂಕ್ಷ್ಮ ನಿಯೋಗತಕ್ಕೆ ಸಿಕ್ಕು ಮಲ ಸರ್ಜ ದೊರೆಯು ಪರಶಿವನ ಸಾನಿಧ್ಯವನ್ನು ಸೇರಿದನು ಮಲಸರ್ಜನು ಶಿವ ಸಾನಿಧ್ಯವನ್ನು ಸೇರಲು ತನ್ನ ಶಿಷ್ಯನ ಮರಣವು ತನ್ನ ಕುಮಾರನ ವಾಕ್ಯ ಬೋಧನೆಯಿಂದಲೇ ಆಯಿತೆಂದು ಚಿಂತಿಸುತ್ತ ತನ್ನ ಕನಸಿನಲ್ಲಿಯು ಗುರು ವಾಕ್ಯವನ್ನು ನೆನೆದು ತನ್ನ ಅವಸಾನಕಾಲ ಸಮೀಪಿಸಿತೆಂದು ತಿಳಿದು ಮುಂದೆ ತನ್ನ ಕಣ್ಣೆದುರಿನಲ್ಲಿ ಬಾಲ–ಮಡಿವಾಳನನ್ನು ಮಠದ ಪಟ್ಟಕ್ಕೆ ಅಧಿಕಾರಿ ಯನ್ನಾಗಿಮಾಡಬೇಕೆಂದು ನಿಶ್ಚಯಿಸಿದರು. ಹೀಗೆ ಮನಸ್ಸಿನಲ್ಲಿ ನಿಶ್ಚಯಿಸಿದ ಗುರುವರನು ತನ್ನ ಮಗು ಮಡಿವಾಳನನ್ನು ಕರೆದು ಮಗು ನನ್ನ ಅವಸಾನ ಕಾಲ ಸಮೀಪಿಸಿತು. ಕಾರಣ ನೀನು ಇನ್ನು ಮಠಾಧಿಕಾರಿಯಾಗು ಎಂದು ಹೇಳಲು,

ಮಡಿವಾಳೇಶ್ವರರು ತಂದೆಯ ಮಾತಿಗೆ ಸಮ್ಮತಿಯನಿತ್ತು ಮಠದ ಪಟ್ಟಾಧಿಕಾರಿಯಾಗಲು ಸಿದ್ಧರಾದರು. ಗುರುವಿನ ಆಜ್ಞೆಯಂತೆ ಎಲ್ಲ ಸಿದ್ಧತೆ ಗಳು ನಡೆದವು. ಅಲ್ಲಿ ಮಠವಾಸಿಯಾದ ವಿರುಪಾಕ್ಷ ಶರಣನು ಮಾತ್ರ ಈ ಸಿದ್ಧತೆಯನ್ನು ನೋಡಿ ತಳಮಳಿಸಿದನು. ತಾನು ಮಠಪಟ್ಟಕ್ಕೆ ಕೂಡ್ರ

ಬೇಕೆಂಬ ದುರಾಶೆಯಿಂದ ಪೂರಿತನಾದ ಆ ಚಾಂಡಾಲನು ತನ್ನ ದುರಿಚ್ಛೆ ಪೂರ್ತಿಗಾಗಿಯೇ ಚಿಕ್ಕಂದಿನಿಂದಲೂ ಮಲ್ಲಪ್ಪ ಶೆಟ್ಟಿಯ ಸ್ನೇಹದಿಂದ ಬಾವು ರಾಜನಿಂದ ಕೂಡಿಕೊಂಡು ದುರಾಲೋಚನೆ ತುಂಬಿ ಕಿತ್ತೂರ ಸಂಸ್ಥಾನದ ಅವನತಿಯ ವೃಕ್ಷಬೀಜಾಂಕುರವನ್ನು ಬಿತ್ತಿದನು. ಇವರು ನಮ್ಮ ಚರಿತ್ರೆಯಲ್ಲಿ ತ್ರಿದುಷ್ಟರೆಂಬ ಹೆಸರಿನಿಂದ ಮೆರೆದಿರುವರು. ಈ ತ್ರಿದುಷ್ಟ ವರ್ಗದಲ್ಲಿ ವಿರುಪಾಕ್ಷನ ಪಟ್ಟದಾಶೆ ಮಲ್ಲಪ್ಪಶೆಟ್ಟಿಯ ದುಡ್ಡಿನಾಶೆ ಬಾವುವಿನ ರಾಜ್ಯಮದ ಇವು ವಡೆದು ಕಾಣುವಂತಿದ್ದರೂ ಈ ಮೂವರು ಮೂರ್ಖರಲ್ಲಿ ಒಬ್ಬರ ಇಚ್ಛೆಯೂ ಪೂರ್ತಿಯಾಗಲಿಲ್ಲ. ಇರಲಿ ವಾಚಕರೇ ಈ ವಿಷಯಕ್ಕೆ ಗಮನಿಸದೆ ಪಟ್ಟಕ್ಕೆ ಕೂಡ್ರಲು ಸಿದ್ಧರಾದ ಸ್ವಾಮಿಯವರ ವಿಷಯಕ್ಕೆ ಲಕ್ಷ ಕೊಡುವಾ.

ಈ ಪರಿ ಪ್ರಭುಸ್ವಾಮಿಗಳವರ ಆಜ್ಞೆಯಂತೆ ಶ್ರೀಗುರು ಮಡಿವಾಳೇಶ್ವರರ ಪಟ್ಟಗಟ್ಟುವ ಸಿದ್ಧತೆಯು ನಡೆಯಿತು. ಬರೇ ಒಬ್ಬ ಸನ್ಯಾಸಿಯ ಪಟ್ಟಕ್ಕೆ ಅನೇಕ ರೀತಿಯ ಶೃಂಗಾರವಾಗುವಾಗ ಕನ್ನಡಾಂಬೆಯ ಮೂಲವಾದ ಕಿತ್ತೂರ ಸಂಸ್ಥಾನದ ರಾಜಗುರುವಿನ ಪಟ್ಟಗಟ್ಟುವದೆಂದಮೇಲೆ ಕೇಳುವದೇನು ಕಲ್ಮಠವು ಅತಿ ಶೃಂಗಾರವಾಗಿ ತಳಿರು ತೋರಣಗಳಿಂದ ಶೃಂಗರಿಸಲ್ಪಟ್ಟಿತು. ಪ್ರಭುಸ್ವಾಮಿಗಳು ಮಗುವಿನ ಪಟ್ಟಗಟ್ಟುವದರಲ್ಲಿ ಅತಿ ಉತ್ಸುಕತರಾಗಿದ್ದರು ಆಗದೇನು ಮಾಡ್ಯಾರು ತಾನು ನೆಟ್ಟ ಗಿಡವು ಮಧುರ ತರ ಫಲಗಳನ್ನು ಕೊಡುವದನ್ನು ನೋಡಿ ಯಾರು ಆನಂದ ಬಡಲಿಕ್ಕಿಲ್ಲ. ಪರಶಿವನಲ್ಲಿ ಕಾಡಿಬೇಡಿದ ಕುವರನ ಆಶೆಯ ಅಂಕುರವು ಮೊಳೆತು ಮಡಿವಾಳೇಶ್ವರ ರೂಪದಲ್ಲಿ ಪಟ್ಟದಲ್ಲಿ ಶೋಭಿಸುವದನ್ನು ನೋಡಿ ಪ್ರಭುವು ಆನಂದಾಶ್ರುಗಳನ್ನು ಉದುರಿಸಿದನು.

|| ಅಂತು ಪಟ್ಟವನಾಂತ ಗುರುವರ |
ಕಂತುಹರಸುತ ಪಟ್ಟವದುತ
ಸಂತಸದಿ ಮೆರೆದು ಭುವನದಲಿ ಜನ ನಿತ್ಯ ಹೊಗಳಲ್ಕೆ ||
ಶಾಂತ ಮಾದುದು ಭವವರಾಗಳೆ |
ಶಾಂತಿ ದೇವನ ಧೀರ ಪಟ್ಟದಿ
ಭ್ರಾಂತಿ ಬಿಡಸಿದ ನಿತ್ಯ ಗುರುವರ ಬ್ರಾಂತ ಭವವಿಜಯ ||-||

ಮೇಲೆ ಹೇಳಿದಂತೆ ಶ್ರೀಗುರು ಮಡಿವಾಳೇಶ್ವರರು ಕಿತ್ತೂರ ಕಲ್ಮಠದ ಪಟ್ಟವನ್ನು ಅಲಂಕರಿಸಿದಾಗ ಜನರು ಆನಂದಿತರಾದರು. ಶ್ರೀಗುರುವಿನ ಬುದ್ಧಿಚಾತುರ್ಯವನ್ನು ಅವನ ವಾಕ್ಯ ಸಿದ್ಧಿಯನ್ನು ಕಂಡ ಜನರು ಅವರ ಗುರುತ್ವದಿಂದ ತಾವು ಉದ್ಧಾರವಾಗಬಹುದೆಂದು ಆಶಿಸಿದರು. ನೋಡಿ ಮಹಾಶಯರೇ ವಿಶ್ವ ಜಗತ್ತಿನಲ್ಲಿ ಶಿವಸ್ವರೂಪಿಯಾದ ಗುರುವು ಭವನಿಯಮಕ್ಕನುಸಾರವಾಗಿ ಆಟಕ್ಕೆ ತಕ್ಕಂತೆ ಸೋಗು ಹಾಕಬೇಕಾಯಿತು. ಆ ಆಟಕ್ಕೆ ತಕ್ಕಂತೆ ಬಂದ ಸಂಕಟಗಳೆಂಬ ವರೆಗಲ್ಲುಗಳಿಗೆ ಘರ್ಷಿಸಿ ತಮ್ಮ ಪ್ರಭಾವ ಶಕ್ತಿಯನ್ನು ಜಗತ್ತಿಗೆ ತೋರಿಸಬೇಕಾಗುತ್ತದೆ.

ಭವನಿಯಮ ಬದ್ಧನಾದ ಮಾನವನು ಭವನಿಯಮದ ತಕ್ಕಂತೆ ಜನನ ಮರಣಕ್ಕೆ ಒಳಪಡಲೇಬೇಕಾಗುತ್ತದೆ. ಈ ಪರಿ ಪ್ರಭುಸ್ವಾಮಿಗಳು ತಮ್ಮ ಇಚ್ಛೆಯಂತೆ ತಮ್ಮ ಸಾಕ್ಷಾತ್ ಯೋಗ್ಯ ಅಧಿಕಾರಿಯು ಮಠಕ್ಕೆ ಅಧಿಕಾರಿಯಾದನೆಂಬ ಸಂತೋಷದಿಂದ ಕೆಲಕಾಲ ಕಳೆದು ಕಡೆಗೊಂದುದಿನ ಮಡಿವಾಳೇಶ್ವರರನ್ನು ಕರೆದು ಭವದ ಜನರಂತೆ " ಮಗು ಮಡಿವಾಳಾ ನಾನಿನ್ನು ಬಹಳ ದಿವ್ಸ ಬದುಕಲಾರೆ ನೀನು ನನ್ನ ಮಠದ ಅಧಿಕಾರಿಯಾದದ್ದು ಪರಶಿವನ ಇಚ್ಛೆ ನೀನು ಎಂಥ ಪ್ರಸಂಗ ಬಂದರೂ ಕೋಪಕ್ಕೆ ಎಡೆಗೊಡಬೇಡಾ ನನ್ನ ಶಿಷ್ಯನ ಸಂಸ್ಥಾನ ಚಿಂತನೆಯು ಸದಾ ನಿನ್ನ ಮನಸ್ಸಿನಲ್ಲಿ ಇರಲಿ ಎಂದು ಹೇಳಿ ತಮ್ಮ ಕಡೆಯ ಶ್ವಾಸ ತಗೆದುಕೊಂಡು ದೇಹ ನೀಗಿದರು. ಸ್ವಾಮಿಯವರು ಈಪರಿ ದೇಹನೀಗಿದ ನಂತರ ಶ್ರೀಗುರು ಮಡಿವಾಳೇಶ್ವರರು ಕೆಲಕಾಲ ಮಠದ ಪಟ್ಟಾಧಿಕಾರದ ಸ್ಥಾನದಲ್ಲಿ ಕಳೆದರು.

ಭರದಿ ಪಟ್ಟವನೇರು ತಾಗಳೆ |
ಸುರರ ದೇವಳನಮರ ಗಂಗಾ
ವರ ಸಿಧಿಯ ತರುತ್ತ ಶಾಪವನಿತ್ತನಾ ಬಾಪು ರಾಜಂಗೆ ||

ಯಾವ ವಿಶ್ವವು ಪರಮಾತ್ಮನ ಅಂಶೀ ಭೂತವೋ ಅಂಥ ಪರಶಿವನ ಕುವರನು ಬ್ರಹ್ಮಾಂಡದ ಒಂದು ಭಾಗವಾದ ಕಿತ್ತೂರ ಕಲ್ಮಠದ ಪಟ್ಟಾಧಿಕಾರಿಯಾಗಿ ಮೆರೆಯ ಹತ್ತಿದನು. ಮಹಾಸ್ವಾಮಿಯವರು ಪಟ್ಟಾಧಿಕಾರಿಗಳಿದ್ದಾಗ್ಗೆ ಕಿತ್ತೂರ ಗಾದಿಗೆ ಬಾಪುರಾಜರು ಅಧಿಕಾರಸ್ಥರಾಗಿದ್ದರು ಹಿಂದೆ

ಹೇಳಿದಂತೆ ಬಾಲ್ಯದಲ್ಲಿ ಬೆಳೆದ ವೈರವು ಬಾಪುನ ಮನಸ್ಸಿನಲ್ಲಿ ಒಂದೇಸವನೆ ಕಟಿಯುತ್ತಿತ್ತು. ಅದೇ ಕಾಲಧೀನನಾದ ಮಲಸರ್ಜ ಭೂವರನ ತರುವಾಯ ಪಟ್ಟಾಭಿಷಿಕ್ತನಾಗುವ ಕಾಲ ಅವನಿಗೆ ಬಂದಿತ್ತು. ಆಗ ಅವನ ಶಾಲೆಯ ಮಿತ್ರರಾಗಿದ್ದ ಮಲ್ಲಪ್ಪಶೆಟ್ಟಿ ವಿರುಪಾಕ್ಷ ಶರಣರೇ ಅವನ ಹಿತೈಷಿಗಳೂ ಉಪದೇಶಕರಾಗಿದ್ದರು ಯಾವ ನೀಚಾತ್ಮ ತ್ರಿವರ್ಗವು ಬಾಲ್ಯದಿಂದಲು ಗುರುವಿನಲ್ಲಿ ಜನ್ಮ ವೈರತ್ವವನ್ನು ಕಟ್ಟಿಕೊಂಡಿತ್ತೋ ಅದೇ ಈಗ ಕಿತ್ತೂರ ಸಂಸ್ಥಾನದ ಆಧಾರಸ್ಥಂಭವಾಯಿತು. ಬಾಪುರಾಜನು ಜನ್ಮಥಹ ರಾಜ್ಯಾಧಿಕಾರಿಯಾಗಿದ್ದರೂ ಅವನ ಮಲತಾಯಿಯಾದ ವೀರರಾಣಿ ಕಿತ್ತೂರ ಚನ್ನಮ್ಮಾಜಿಯು ಅವನ ಮಂತ್ರಿ ಸಮಾನ ರಾಜ್ಯಭಾರ ಮಾಡುತ್ತಿದ್ದಳು. ಅವಳು ಸದಾವ ಕಾಲದಲ್ಲಿಯೂ ತನ್ನ ಪತಿಯ ಮರಣಕಾಲಕ್ಕೆ ವಚನ ಕೊತ್ತಂತೆ ಬಾಪುವಿನ ಹಿತಚಿಂತನೆಯನ್ನು ಮಾಡುತ್ತಿದ್ದಳು.

ನೋಡಿ ವಾಚಕರೇ ಮಾನವ ಜನ್ಮದಲ್ಲಿ ಮಾನವನಿಗೆ ದುಷ್ಟ ಗುಣಗಳು ಸಹಜವಾಗಿ ತೊಡಕುವವು. ಆದರೆ ಸುಗುಣಿಯಾಗುವದು ಮಾತ್ರ ಸಲ್ಪ ಕಠಿಣವೆನಿಸುವದು. ಮನುಷ್ಯನ ಶಿರಿ ಯೌವ್ವನ ನೀಚೋಪದೇಶ ಈ ಮೂರು ಗುಣಗಳಲ್ಲಿ ಒಂದು ಇದ್ದರೆ ಅವನು ಪ್ರಪಂಚದಲ್ಲಿ ಮಧಾಂದನಾಗಿ ಮುಕ್ತಿಮಾರ್ಗ ಮರೆಯುವನು. ಈಗ ನಮ್ಮ ಬಾಪುರಾಜನಿಗೆ ಶರೀರದ ತ್ರಿಗುಣಗಳು—ವಾತ—ಪಿತ್ತ—ಕಪ—ಗಳು ಕೂಡಿದರೆ ದೇಹಾವಸಾನ ಹೇಳಿಸುವಂತೆ ಧನ ಯೌವನ ನೀಚೋಪದೇಶಗಳು ಏಕಕಾಲಕ್ಕೆ ಸಮ್ಮಿಲಿತವಾಗಿದ್ದವು. ಅಂದಮೇಲೆ ಕೇಳುವದೇನು ಅವನು ತನ್ನ ಮಧಾಂದ ವೃತ್ತಿಯಲ್ಲಿ ಜಗತ್ತಿನಿಂದ ಕೈಲಾಸಕ್ಕೆ ಮೂರೇ ಬೆರಳು ಬಿಟ್ಟಿದ್ದನು. ರಾಜ್ಯಸೂತ್ರ ಕೈಯಲ್ಲಿ ಬರುವದೊಂದೇ ತಡ ಅವನು ತನ್ನ ಮಾತೆಯ ಮಾತಿಗೆ ಮಾನಕೊಡದಾದನು. ನೀಚರಾದ ವಿರುಪಾಕ್ಷ ಮಲ್ಲಪ್ಪರ ಮಾತಿಗೆ ಕಿವಿಗೊಟ್ಟು ಗುರುದ್ರೋಹವೆಂಬ ಅಧಃಪತ ತುಳಿಯಲು ಸಿದ್ಧನಾದನು. ಈ ತ್ರಿದುಷ್ಟ ವರ್ಗವು ಯಾವನ ಜನ್ಮ ವೈರವನ್ನು ಬಾಲ್ಯದಿಂದ ಕಟ್ಟಿಕೊಂಡಿತ್ತೋ ಅಂಥ ಸದ್ಗುರು ಮಡಿವಾಳೇಶ್ವರನನ್ನು ಕಿತ್ತೂರ ಕಲ್ಮಠದ ಗಾದಿಯಿಂದ ತಳ್ಳಿಹಾಕಲು ಹೊಂಚು ಹಾಕಲು ಕೂಡಿದರು. ಕಿತ್ತೂರ ಮಾತೆಯಾದ ಚನ್ನಮ್ಮಾಂಬೆಯ ಜೀವನ ಸರ್ವಸ್ವವಾದ ಸಂಸ್ಥಾನವನ್ನು ಗುರುಕ್ಷೋಭೆಗೆ ಈಡುಮಾಡಲು

ಯತ್ನಿಸಿದ ತ್ರಿದುಷ್ಟರು ಮುಂದೆ ಏನು ಮಾಡಬಹುದು ಎಂದು ನಮ್ಮ ವಾಚಕರು ಕುತುಹಲಿತರಾಗಿರಬಹುದು.

ಮಹಾಶಯರೇ ಜಗತ್ತಿನಲ್ಲಿ ತಿಳಿಯಲಸಾಧ್ಯವಾದ ಸ್ತ್ರೀ ನೆಲೆ ತಿಳಿಯಬಹುದು ನೀರು ನೆಲೆಗೆ ಹಚ್ಚಬಹುದು. ಅತಿ ದುಷ್ಟ ಕುದುರೆಯನ್ನು ಕಡಿವಾಣ ಹಾಕಬಹುದು. ಆದರೆ ದುಷ್ಟರ ಹೃದಯದ ದುರಾಗ್ರಹದ ನೆಲೆ ತಿಳಿಯಲು ತ್ರಿಮೂರ್ತಿಗಳಿಂದಲೂ ಅಸಾಧ್ಯ. ಅವರು ಸವಿಮಾತಿನಿಂದ ಮನರಂಜಿಸಿ ತಮ್ಮ ದುರಾಗ್ರಹದ ಕ್ರೂರವೃತ್ತಿಯನ್ನು ಪೂರ್ಣಮಾಡಿಕೊಳ್ಳುವರು. ಅವರಂತೆ ಈ ನೀಚರು ತಮ್ಮ ಹೃದಯ ಭಾವನೆಯನ್ನು ಹೊರಗೆಡವಿ ತಮ್ಮ ದುರಾಶೆ ಪೂರ್ತಿಗಾಗಿ ಯತ್ನಿಸುವದು ಆಶ್ಚರ್ಯವಲ್ಲ.

ಈರೀತಿ ಹೊಂಚುಹಾಕಿದ ಈ ಮೂವರು ಪ್ರತಿನಿತ್ಯ ಒಂದು ಸ್ಥಳದಲ್ಲಿ ಕೂಡಿ ಕಿತ್ತೂರ ನಾಶಕ್ಕೆ ಕಾರಣೀ ಭೂತರಾಗಿ ಗುರುವನ್ನು ಹೇಗೆ ಹೊರಗೆ ಹಾಕಬೇಕೆಂಬ ಆಲೋಚನೆಯಲ್ಲಿ ಇರುತ್ತಿದ್ದರು. ಹೀಗಿರುವಾಗ ಒಂದು ದಿವ್ಸ ಇದನ್ನರಿತ ಚನ್ನಮ್ಮಾಜಿಯು ತನ್ನ ಮಗನನ್ನು ಕುರಿತು "ಮಗುವೇ ಈರೀತಿ ಗುರುವಿನಲ್ಲಿ ದ್ರೋಹಕಟ್ಟಿಕೊಂಡು ನಿನ್ನ ನಾಶವನ್ನು ನೀನೇ ಮಾಡಿಕೊಳ್ಳಬೇಡಾ. ನಿನ್ನ ಅವನತಿಯನ್ನು ಸೂಚಿಸಿದ ಗುರುವಿನಲ್ಲಿ ಕ್ಷಮೆಬೇಡಿ ಕೃತಾರ್ಥನಾಗು" ಎಂದು ಉಪದೇಶಿಸಿದಳು. ಆದರೆ ಅವಳ ಉಪದೇಶವು ಕೆಳಗಿನ ನೀತಿಯ ವಾಕ್ಯದಂತೆ

ಉಪದೇಶೋಹಿ ಮೂರ್ಖಾಣಾಂ| ತಪ್ರ ಪ್ರಕೋಪಾಯನ ಶಾಂತಯೇ।
ಪಯಃ ಪಾನಾಂ ಭುಜಂಗಾನಾಂ| ಕೇವಲಂ ವಿಷವರ್ದನಂ||

ಬಾಪುರಾಜನ ಕೋಪವನ್ನು ಹೆಚ್ಚಿಸಿತೇ ಹೊರ್ತು ಅವನನ್ನು ಶಾಂತಗೊಳಿಸಲಿಲ್ಲ. ಕೌರವನನ್ನು ರಸಾತಲಕ್ಕೆ ತುಳಿಯಲು ಶಕುನಿಯು ಅವನನ್ನು ದುರ್ಮಾರ್ಗಿಯನ್ನಾಗಿ ಮಾಡಲು ವಿಷಪಾನಾರಂಭದಿಂದ ದ್ಯೂತ ಪರಿಯಂತ ದುಷ್ಕಾರ್ಯ ಮಾಡಿಸಿ ಕೌರವ ಪಾಂಡವರಲ್ಲಿ ಕಲಹ ಬೀಜವನ್ನು ಬಿತ್ತಿದಂತೆ ಬಾಪುರಾಜ ಮಡಿವಾಳೇಶ್ವರರಲ್ಲಿ ತಮ್ಮ ಸ್ವಾರ್ಥಕ್ಕಾಗಿ ಕಲಹ ಬೀಜವನ್ನು ಗುರುದ್ರೋಹ ರೂಪದಿಂದ ಬಿತ್ತಿದರು ಮಡಿವಾಳೇ

ಸ್ತರು ಕಿತ್ತು ತಿಂದು ಹೋಗಲು ಒಂದು ಯುಕ್ತಿಯನ್ನು ಹೂಡಿದರು. ಪಟ್ಟಾಭಿಷಿಕ್ತನಾಗಲಿರುವ ಬಾಪುವಿಗೆ ಅಭಿಷೇಕಕ್ಕಾಗಿ ಗಂಗಾಜಲ ತರಲು ಗುರುವರನ್ನು ಕಳುಹಲು ಯುಕ್ತಿಮಾಡಿ ಆ ದುಷ್ಟರು ನಕ್ಕರು.

ಈ ಪರಿ ಆ ದುಷ್ಟರಲ್ಲಿ ನಿರ್ಣಯವಾದಂತೆ ಬಾಪುರಾಜನು ಸ್ವಾಮಿಗಳವರಲ್ಲಿ ವಂಚನೆಯಿಂದಾ ಕ್ಷಮೆಬೇಡ ಹೋಗಬೇಕೆಂದು ನಿರ್ಧರಿಸಿದರು. ಮಾರನೇ ದಿನ ಸೂರ್ಯೋದಯಕ್ಕೆ ನಿತ್ಯಕರ್ಮ ತೀರಿಸಿಕೊಂಡು ಬಾಪುವು ನೀಚ ಸ್ನೇಹಿತರಿಗೆ ಭೆಟ್ಟಿಯಾಗಿ ಸದ್ಗುರುವರನನ್ನು ವಂಚಿಸುವದಕ್ಕಾಗಿ ಕಲ್ಮಠದ ಮಾರ್ಗವಾಗಿ ಹೊರಟನು. ವಾಚಕರೇ! ಸನ್ಮಾರ್ಗ ಪ್ರವೃತ್ತರಾದ ಮಹಾತ್ಮರ ದರ್ಶನಕ್ಕಾಗಿ ಹೊರಟ ದುಷ್ಟ ಬಾಪುವು ಸಹ ಸದ್ಬುದ್ಧಿಗೆ ಅನುವಾದನು. ನಾನು ಗುರುವರನನ್ನು ಹೇಗೆ ವಂಚಿಸಲಿ ಎಂಬ ಭಾವನೆಯು ಅವನಲ್ಲಿ ಮೂಡಿ ಮೂಡಿ ಮರೆಯಾಯಿತು. ಸದ್ಭಾವ ದುರ್ಬುದ್ಧಿಯಿಂದೊಡಗೂಡಿದ ಬಾಪುರಾಜನು ಕಲ್ಮಠದ ದ್ವಾರದಲ್ಲಿ ಪ್ರವೇಶಿಸಿದನು. ಎಂದೂ ಆಗದ ವಿಷಯವು ಘಟಿಸಿತೆಂದರೆ ಮಹಾತ್ಮರೂ ಸಹ ಆಶ್ಚರ್ಯಪಡುವರು. ಎಂದೂ ಬಾರದ ಬಾಪುವು ಜನ್ಮ ವೈರ ಮರೆತು ಸ್ನೇಹಭಾವ ತಳೆದದ್ದನ್ನು ನೋಡಿ ಗುರುವು ಆನಂದ ಭರಿತನಾದನು. ಮಹಾತ್ಮರು ಎಷ್ಟು ಕೋಪಿಷ್ಠರೋ ಅಷ್ಟೇ ಕ್ಷಮಾ ಬುದ್ಧಿಯುಳ್ಳವರು. ಬಾಪು ಬಂದೊಡನೇ ಗುರುವು ಅವನನ್ನು ಆದರಿಸಿ ಕ್ಷೇಮ ವಿಚಾರಿಸಿದನು. ಬಾಪುವು ಮನಸ್ಸಿನಲ್ಲಿ ಕಪಟವನ್ನಿಟ್ಟುಕೊಂಡು ಗುರುವಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಆಗ ಗುರುವು ಬಾಪುರಾಜಾ ಏನು ಸಮಾಚಾರ! "ಮಗು ಏತಕ್ಕಾಗಿ ಇಲ್ಲಿಯವರೆಗೆ ಬಂದೆ! ಏನಾದರೂ ಅಂಥ ಕಾರಣವಿದ್ದಲ್ಲಿ ಕರೆಕಳಿಸಿದ್ದರೆ ನಾನೇ ಬರುತ್ತಿದ್ದೆನಲ್ಲಾ" ಎಂದರು. ಅದಕ್ಕೆ ಬಾಪುರಾಜನು "ಮಧುತಿಷ್ಠತೀ ಜಿಹ್ವಾಗ್ರೇ ಹೃದಯೇತು ಹಾಲಹಲಂ" ಎಂಬ ಉಕ್ತಿಗನುಸಾರವಾಗಿ ಹೃದಯದಲ್ಲಿ ಕಾಪಟ್ಯದ ವಿಷ ತುಂಬಿಕೊಂಡು ಮೇಲೆ ಸವಿನಯದಿಂದಾ ಗುರುವಿಗೆ ವಿನಂತಿ ಮಾಡಿಕೊಂಡನು. "ಗುರುವರಾ ನಾನು ಪಟ್ಟಾಭಿಷಿಕ್ತನಾಗುವವನಿದ್ದೇನೆ. ಕಾರಣ ಕಾಶಿಯಲ್ಲಿ ವಿಶ್ವನಾಥನ ಸಮ್ಮುಖದಲ್ಲಿ ನಿತ್ಯ ಪವಿತ್ರವಾಹಿನಿಯಾಗಿ ಹರಿವ ಗಂಗಾ ಮಾತೆಯ ಉದಕವನ್ನು ತಂದು ಕೊಡಬೇಕು. ಮುಹೂರ್ತದೊಳಗಾಗಿ ತಂದು

ಕೊಡುವ ಶಕ್ತಿವಂತರು ನೀವೇ ಅಲ್ಲದೆ ಇನ್ನಾರೂ ಇಲ್ಲವೆಂದು ನನ್ನ ಮಾತೆ ಮೊದಲ್ಗೊಂಡು ಎಲ್ಲಿ ಹಿರಿಯರೂ ಅಭಿಪ್ರಾಯ ಪಡುತ್ತಾಗೆ." ಎಂದು ಹೇಳಿ ಬಾಪುವು ಸುಮ್ಮನಾದನು. ನೋಡಿದಿರಾ! ಎಷ್ಟಾದರೂ ಸತ್ಸಂಗ ಪುನೀತ ಮಹಾನುಭಾವರ ಭಾವನೆಯು ಒಳ್ಳೆಯದೇ ಆಗಿರುತ್ತದೆ. ಕಾರಣ ಗುರುವರರು ಬಾಪುವಿನ ಕಾಪಟ್ಯಭಾವದ ಕಲ್ಪನೆಯಿಲ್ಲದಲೇ ಬಾಪುವು ತನ ಗಾಗಿ ಎಂಥ ಪವಿತ್ರ ಕಾರ್ಯ್ಯವನ್ನು ನಿಯಮಿಸಿಟ್ಟಿರುವನಲ್ಲಾ! ಇದು ಅಲ್ಲದೆ ಗಂಗಾಜಲ ನಿಮಿತ್ತ ಭೂಮಿಯ ಜನರಿಗೆದರ್ಶನಾರ್ಥಿಯಾಗಿ ಮೂರ್ತಿ ರೂಪಿ ತನ್ನ ಪಿತವರನಾದ ವಿಶ್ವನಾಥನ ದರ್ಶನವು ತನಗೆ ಆಗುವದೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ತಾನು ರಾಜಗುರುವಾದ್ದರಿಂದ ರಾಜನ ಕಾರ್ಯವು ಎಂಥ ಕಠಿಣವಿದ್ದರೂ ಪೂರೈಸುತ್ತೇನೆಂದು ವಚನವಿತ್ತು ಗಂಗಾ ಜಲಕ್ಕಾಗಿ ಕಾಶಿಗೆ ಹೋಗುತ್ತೇನೆಂದು ರಾಜನಿಗೆ ಸಮಾಧಾನ ಹೇಳಿಕಳುಹಿಸಿದರು.

ಇತ್ತ ಗುರುವನ್ನು ತನ್ನ ಬಲೆಯಲ್ಲಿ ಕೆಡವಿಕೊಂಡೆನೆಂದು ಬಾಪು ರಾಜನು ಸಂತೋಷದಿಂದ ಮನೆಯ ಮಾರ್ಗ ಹಿಡಿದನು. ತಲೆ ಅಲ್ಲಾಡಿ ಸುತ್ತ ಮುಂದೆ ಆಗುವ ಭವಣೆಯನ್ನು ತಿಳಿಯದೆ ಜಾಲಗಾರನ ಗಾಳದ ಮೊಳೆಹುಳ ತಿಂದ ಮೀನದಂತೆ ಬಾಪುರಾಜನು ವಾಡೆಯ ಹಾದೀ ಹಿಡಿದನು. ಇತ್ತ ಗುರುವರರು ತಮ್ಮ ಪ್ರಯಾಣದ ಸಿದ್ಧತೆಗಾಗಿ ತನ್ನ ಪ್ರೀತಿಯ ಭಕ್ತ ಶಿರೋಮಣಿ ಮಲ್ಲಣನನ್ನು ಕರೆಯಿಸಿದನು. ಭಕ್ತರು ಎಂಬ ಜನರು ಜಗ ತ್ತಿನಲ್ಲಿ ಅನೇಕರುಂಟು. ಸ್ವಾರ್ಥಸಾಧನೆಗಾಗಿ ಪರಶಿವನನ್ನು ಭಕ್ತಿಯಿಂದಾ ಪೂಜಿಸುವವರು ಇಚ್ಛಾಭಕ್ತರು. ಫಲಪ್ರಾಪ್ತಿಗಾಗಿ ದೇವಾರಾಧನೆ ಮಾಡು ವವರೂ, ಸ್ವಾರ್ಥವಿಲ್ಲದೆ ಗುರುವಿನ ಸೇವೆಯೇ ತಮ್ಮ ಕರ್ತವ್ಯವೆಂದು ಮಾಡುವ ಭಕ್ತರು ಅನೈಚ್ಛಿಕ ಭಕ್ತರು. ಇವರಿಗೆ ಫಲದಾಶೆಯಿಲ್ಲಾ ಇವ ರಿಗೆ ಜಗದಲ್ಲಿ ಭಕ್ತಶ್ರೇಷ್ಠರೆಂಬ ಹೆಸರು. ಇಂಥವರಲ್ಲಿ ನಮ್ಮ ಗುರುವರರ ಭಕ್ತ ಬೆಳವಡಿ ಮಲ್ಲಣ್ಣನಾಗಿದ್ದನು. ಗುರುವಿನ ಕರೆಬಂದೊಡನೆಯೇ ಮಲ್ಲಣನು ತಾನು ಧನ್ಯನಾದೆನೆಂದು ತಿಳಿದನು. ಗುರುವರನಾಜ್ಞೆಯೇ ನೆಂದು ಬಂದು ಕೇಳಿದನು. ಆಗ ಮಡಿವಾಳೇಶ್ವರರು "ಮಲ್ಲಣ್ಣಾ ಬಾಪು ವಿಗೆ ಗಂಗಾಜಲವನ್ನು ತರಲು ಹೊರಟೆ ನನ್ನ ಕೂಡಾ ನೀನು ಬರಬೇಕು." ಎಂದು ಅಜ್ಞಾಪಿಸಿದರು. ಆಗ ಮಲ್ಲಣ್ಣನು ಗುರುವರನ ಪ್ರಸಾದವು ಶಿರ

ಸಾಮಾನ್ಯವಾದ ಆಜ್ಞೆಯೆಂದು ಪರಿಗ್ರಹಿಸಿದನು. ಮಲ್ಲಣನು ಬೆಳಗಾಗು ವದರೊಳಗೆ ಕುದುರೆಯನ್ನು ಸಿದ್ಧಪಡಿಸಿ ಪ್ರವಾಸಕ್ಕೆ ಬೇಕಾಗುವ ಸಾಮುಗ್ರಿ ಗಳನ್ನು ಸಿದ್ಧಪಡಿಸಿದನು. ಮುಂದೆ ಕಾರ್ತಿಕ ಶುದ್ಧ ಪ್ರತಿಪದೆಯ ದಿವಸಕ್ಕೆ ಪಟ್ಟಾಭಿಷಿಕ್ತನಾಗುತ್ತಿದ್ದ ಬಾಪುವಿಗಾಗಿ ಗಂಗಾಜಲವನ್ನು ತರಲಿಕ್ಕೆ ಮಹಾ ಸ್ವಾಮಿಯು ೧೭೧೬ನೇ ವಿಜಯಾದಶಮಿಯ ದಿವಸ ಕಿತ್ತೂರಿಂದ ಪ್ರಯಾಣ ಬೆಳೆಸಿದನು.

ಇಂತು ಗುರುವರರು ಕಿತ್ತೂರ ಕಲ್ಮಠದಿಂದ ಹೊರಡುವಾಗ್ಯೆ ತನ್ನ ಮಠದ ವ್ಯವಸ್ಥೆಗಾಗಿಯೂ ತನ್ನ ಪೂಜ್ಯ ಪಿತವರ ಪ್ರಭುಸ್ವಾಮಿಯ ಗದ್ದು ಗೆಯ ಪೂಜೆಗಾಗಿಯೂ, ಬಾಪುವಿಗೆ ಆಜ್ಞಾ ವಿಧಿಸಿದನು. ಗುರುವರರನ್ನು ಕಳುಹಿಸುವದಕ್ಕೆ ಬಾಪುವಿನ ತ್ರಿಮುಷ್ಟರ ಸಂಘಸಹಿತ ಬಂದು ಗುರುವರರನ್ನು ಬಿಳ್ಕೊಟ್ಟು ಹಿಂದುರುಗಿದನು. ಪರಮಭಕ್ತ ಶಿರೋಮಣಿಯಾದ ಮಲ್ಲಣನು ಗುರುಸೇವೆಗಾಗಿ ಕಾಶೀ ಯಾತ್ರೆಗೆ ಹೊರಟನು.

ನೋಡಿ ವಾಚಕರೇ! ದುಷ್ಟಬುದ್ಧಿ ಪುರಜನರು ಎಷ್ಟು ತರಹದ ಬಲೆ ಒಡ್ಡುವರು, ಎಂಬುದು ಜಗತ್ತಿಗೇ ತಿಳಿಯುವದು ಅಸಾಧ್ಯ. ಜಗತ್ತಿನಲ್ಲಿ ಸ್ತ್ರೀ, ಕುದುರೆ, ನೀರು, ಇವುಗಳ ನೆಲೆಯನ್ನು ಪ್ರಯತ್ನದಿಂದಾ ತಿಳಿಯ ಬಹುದು. ಆದರೆ ನೀಚರ ಹೃದಯ ಕಾಪಟ್ಯವನ್ನು ತಿಳಿಯುವದು ಮಾತ್ರ ಅಸಾಧ್ಯವಾಗಿದೆ. ಅವರನ್ನು ಕಳುಹಿಸುವದೊಂದೇ ತಡ. ಕೂಡಿದ ನೀಚರ ಕೂಟ, ಹೇಗೆ ಪಾಂಡವರನ್ನು ಕಳಿಸಿ ಅವರ ಮುಂದಿನ ವಿನಾಶಕ್ಕಾಗಿ ಕರ್ಣ, ಶಕುನಿ, ದುಃಶ್ಯಾಸನರಿಂದ ಕೂಡಿದ ದುರ್ಯೋಧನನಂತೆ ಬಾಪುವು ತನ್ನ ವಿನಾ ಶಾಂಕುರದ ಬೀಜಕ್ಕೆ ನೀರು ಬಿಡುವ ಆಲೋಚನೆಯನ್ನು ಪ್ರಾರಂಭಿಸಿದನು.

ಮೊದಲು ತಾನು ಮಾಡಿದ ಕಾರ್ಯಕ್ಕೆ ಯಶಬರಲು ಯತ್ನಿಸಿದ ವಿರೂಪಾಕ್ಷಶರಣ, ಮಲ್ಲಪ್ಪಶೆಟ್ಟಿಯನ್ನು ಶ್ಲಾಘಿಸಿದನು. ಮುಂದೆ ಮಹಾ ಸ್ವಾಮಿಯವರ ಪಟ್ಟಕ್ಕೆ ಕೂಡ್ರಿಸುವದಕ್ಕಾಗಿ ಈಗ ಕಿತ್ತೂರಲ್ಲಿ ಪ್ರಸಿದ್ಧ ನಾದ ಚೌಕಿಮಠದ ಅಧಿಕಾರಸ್ಥಾನದಲ್ಲಿದ್ದ ಗಂದಿಗವಡದ ಗುರಶಿದ್ಧ ಸ್ವಾಮಿ ಯವರನ್ನು ಆಮಂತ್ರಿಸಿದನು. ತಾತ್ಕಾಲ ಪಟ್ಟಾಧಿಕಾರಿಯಾಗಲು ಬಾಪುವು ಸ್ವಾಮಿಯವರನ್ನು ಪ್ರಾರ್ಥಿಸಿದನು. ಮೊದಲೇ ಗೊತ್ತಿದ್ದ ಮಹಾತ್ಮರ ಮಹಿಮೆಯನ್ನು ನೋಡಿದ ಗುರುಶಿದ್ಧನು ಪಡುಗ ಪಟ್ಟವೇರಲು ನಿರಾಕರಿಸಿ

ದನು. ಆದರ ರಾಜಸತ್ಯಯು ಅಧಿಕಾರದ ಮುಂದೆ ನಿರುಪಾಯನಾಗಿ ಅನ್ಯಾಸಿಯು ಬಾಪ್ರುನಿನ ಅಜ್ಞೆಯಂತೆ ಕಲ್ಪಿತದ ಪಟ್ಟಿವನ್ನೇರಿದನು. ದುಷ್ಟ ಬಿಜ್ಜಳನು ತತ್ಕಾಲ ಪೂರ್ತಿಯಾದದ್ದಕ್ಕಾಗಿ ಬಾಪ್ರುವು ಸಂತುಷ್ಟನಾಗಿ ವಿರೂಪಾಕ್ಷ ಶರಣನನ್ನು ಮಠದ ಕೋಟೆಯ ಅಧಿಕಾರಿಯನ್ನಾಗಿಯೂ, ಮತ್ತು ಮಲ್ಲಪ್ಪ ಶೆಟ್ಟಿಯನ್ನು ಮಠದ ಕೋಶಾಧ್ಯಕ್ಷನನ್ನಾಗಿಯೂ, ಮಾಡಿ ತಾನು ಸಂತೋಷದಿಂದ ರಾಜಮಂದಿರಕ್ಕೆ ತೆರಳಿದನು.

ಮಗನು ಮಾಡಿದ ನೀಚಕಾರ್ಯವು ಚನ್ನಮ್ಮಾಜಿಯ ಮನಸ್ಸಿಗೆ ಬಾರದೆ ಚಿಂತಾಮಗ್ನಳಾಗಿ ಗುರುಶಾಪ ಭಯದಿಂದ ನಡುಗಿದಳು. ಬಾಪ್ರುವು ಹೇಳಿದ ವೃತ್ತಾಂತವನ್ನು ಮನದಲ್ಲಿ ಪರಿವರ್ತಿಸಿ ಚಿಂತಿಸುತ್ತಿದಳು. ಅದು ರವನ ಆ ವೀರ ಮಾತೆಯು ಚಿಂತಾಮಗ್ನತೆಯಿಂದ ತನ್ನ ಕೊಠಡಿಯಲ್ಲಿ ನಿದ್ರಾಭಂಗದಿಂದ ಪವಡಿಸಿರುವಾಗ್ಯ ಅವಳಲ್ಲಿ ವಿಚಾರ ತರಂಗಗಳಿದ್ದು ಮತಿಭ್ರಮಣೆಯ ಪರಿವರ್ತನೆಯು ಹೆಚ್ಚಾಗಿ ಚಿಂತಾಸಮುದ್ರದಲ್ಲಿ ಮುಳುಗಿ ನಿದ್ರಾಸಕ್ತಳಾದಳು. ನಿದ್ರೆ ಹೋದ ವೀರ ರಾಣಿಯ ಹೃದಯವು ರಾಜ್ಯವನ್ನು ಯಾವಂಥ ಜನರ ತೋಫಿನ ಗರ್ಜನೆಗೆ ಹೆದರಲಿಲ್ಲವಾದರೂ ಗುರುದ್ರೋಹದ ಪಾಪ ಭೀರು ಕೃತ್ಯದಿಂದ ನಡುಗಿದಳು. ಆ ವೀರ ಮಾತೆಯು ಕೆಳಗೆ ಬರೆದ ಪ್ರಕಾರ ಕನಸು ಕಂಡಳು. “ತಾನು ಖಡ್ಗಪಾಣಿಯಾಗಿ ಬಿಡಾರಣ್ಯವನ್ನು ಸೇರಿ ತನ್ನ ಖಡ್ಗದಿಂದ ಕ್ರೂರವನ್ಯ ಪಶುಗಳನ್ನು ಸಂಹರಿಸಿದಳು. ಅವಳು ಮುಂದೆ ಸಾಗುತ್ತಿರುವಾಗ, ಮದ ಘೋರ ವ್ಯಾಘ್ರವು ತನ್ನ ಉಗುರು ವ ಪಂಜರಗಳಿಂದ ಆರ್ಭಟಿಸುತ್ತ ಚನ್ನಮ್ಮಾಜಿಯ ಮೈಮೇಲೆ ಸಾಗಬಂದಿತು. ಆಗ ಆ ಮಹಾಮಾತೆಯು ಹೆದರದೆ ತನ್ನ ವೀರ ಗರ್ಜನೆಯಿಂದ ಖಡ್ಗಪ್ರಹಾರಕ್ಕಾಗಿ ಶ್ರೀಗುರು ಮಡಿವಾಳೇಶ್ವರರ ಸ್ಮರಣೆಯಿಂದಾ ಕೈ ಎತ್ತಿದಳು. ಅಷ್ಟರಲ್ಲಿ ಹಿಂದೆ ಯಾರೋ ಅವಳ ಕೈ ಜಗ್ಗಿದಂತಾಯಿತು. ಆಗ ಆ ವ್ಯಾಘ್ರವು ತನ್ನ ಉಗುರು ವ ಪಂಜರಗಳಿಂದ ಚನ್ನಮ್ಮಾಜಿಯನ್ನು ಹೊಡೆದಿತು. ಆದರೂ ಆ ಮಹಾ ತಾಯಿಗೆ ದೊಡ್ಡ ಘಾಯಗಳಾಗಿ ಮರಣ ಸಂಭವವಾಗಲಿಲ್ಲ. ಮರಣೋನ್ಮುಖಿಯಾದ ತಾಯಿಗೆ ಗುರುವರರು ವರದ ಹಸ್ತವಿಟ್ಟು ತಾಯೀ ಮಗನ ಕರ್ಮದ ಫಲವು ತಾಯಿಗೆ ಎಂದು ಹೇಳಿದಂತಾಯಿತು. ಗುರುವಿನ ವರದ ಹಸ್ತ ಸ್ಪರ್ಶದಿಂದ ಎಚ್ಚತ್ತು ಸುತ್ತು ಮುತ್ತ

ನೋಡಿದಳು ಅಲ್ಲೇನಿದೆ! ಆಘ ಕಾರ! ಕನಸಿನ ವಿಚಾರದಿಂದ ಮಾತೆಯು ಚಿಂತಾಮಗ್ನಳಾದಳು. ಹಾಗೆಯೇ ತನ್ನ ಮಗನ ಆತ್ಮದವನತಿಯ ವಿಚಾರವು ಅವಳ ಮನಸ್ಸಿನಲ್ಲಿ ಹೊಳೆಯದೇ ಹೋಗಲಿಲ್ಲಾ. ಆ ಪರಿಭವ ಬಂಧನದ ಅಳವಿನಿಂದ ದುಃಖದ ಭವಣೆಗೀಡಾದ ಆ ಮಾತೆಯು ತನ್ನ ಸಂಸಾರದ ಅವನತಿಯು ಸಮಾಪಿಸಿ ತೆಂದು ಚಿಂತಿಸಿದಳು. ತಾನು ಮಾಡಿದ ಕರ್ಮದಫಲವನ್ನು ಮನುಷ್ಯನು ಅನುಭವಿಸಿಯೇ ತೀರ ಬೇಕಾಗುತ್ತದೆಂಬ ಮಾತನ್ನು ಮನಗಂಡಳು. ಮತ್ತು ಮನಸ್ಸಿಗೆ ಶಾಂತಿಯನ್ನು ತಾಳಿದಳು. ಮಾನವನು ಯಾವಬೀಜರೂಪವನ್ನು ಭವದಲ್ಲಿ ಬಿತ್ತುವನೋ ಅದೇ ಫಲರೂಪವು ಅಂಕುರವಾಗಿ ಸುಖ ದುಃಖಕ್ಕೆ ಕಾರಣವಾಗುವನು.

ಅಮರ ಗಂಗಾ ಜಲವ ತರುತೆ।
ವಿಮಲ ಭಾರತ ಪ್ರಭು ಮಡಿವಾಳ।
ಅಮಿತ ಶ್ಯಾಪವನೀಡಿ ಮೆರೆದನು ಬಾಪುರಾಜಂಗೆ ||ಪಲ್ಲ||

ಶ್ರೀಗುರು ಮಡಿವಾಳೇಶ್ವರರು ಭಕ್ತ ಮನ ವಾಂಛಿತ ಪೂರ್ತಿಗಾಗಿ ಕಾಶಿಗೆ ಹೊರಟದ್ದು ವಾಚಕರ ಲಕ್ಷದಲ್ಲಿರಬಹುದು. ಈಗ ನಾವಾದರೂ ಸದ್ಗುರುವಿನ ಕೂಡ ಕಾಶಿಗೆ ಹೊರಟು ಅವನು ಏನು ಮಾಡಿದನೆಂಬದನ್ನು ನೋಡುವಾ! ಮಹಾ ಸ್ವಾಮಿಯವರು. ಕಾಶಿಗೆ ಅತಿ ತೀವ್ರ ಪ್ರಯಾಣದ ಮೇಲೆ ಪ್ರಯಾಣವನ್ನು ಮಾಡುತ್ತ ಹೋಗಿ ಮುಟ್ಟಿದರು. ಕಾಶೀ ವಿಶ್ವನಾಥನ ಸುರಮ್ಯ ವಾದ ಪುಣ್ಯಸ್ಥಾನವನ್ನು ನೋಡಿ ಗುರುವು ಆನಂದ ಭರಿತನಾದನು. ಪರಶಿವನ ಸತಿಯಾದ ಗಂಗಾಮಾತೆಯು ಆತನ ಜಟಾಭೂಷಣಳಾಗಿ ಗಂಗಾಧರನೆಂಬ ನಾಮ ಸಾರ್ಥಕ ಮಾಡಿದ. ಪರಮ ಪಾವನ ಭಾಗೀರಥಿ ಯೆಂಬ ನಾಮದಿಂದ ಭಗೀರತಥನ ಕುಲವನ್ನುದ್ಧರಿಸಿದ. ಪರಮ ಪಾವನೆಯ ಸಾನಿಧ್ಯವನ್ನು ಸೇರಿದರು.

ಆ ಗಂಗಾದೇವಿ ಯನ್ನು ಸದಂರ್ಶಿಸಿದ ಕೂಡಲೇ ನನ್ನ ಹೆತ್ತ ತಾಯಿಯನ್ನು ನೋಡಿ ಆನಂದ ಹೊಂದುವ ಶಿಸುವಿನಂತೆ ಗಂಗಾ ಮಾತೆಯನ್ನು ನೋಡಿ ಶ್ರೀ ಮಡಿವಾಳ ಶಿವಯೋಗಿಗಳು. ಆನಂದಾಬ್ಧಿಯಲ್ಲಿ ಮುಳುಗಿ ಉತ್ಕಂಠಿತರಾಗಿ ಗಂಗಾ ಮಾತೆಯ ಪ್ರಾರ್ಥನೆಯನ್ನು ಮಾಡ ತೊಡಗಿದರು.

ಈ ಪರಿಯಾಗಿ ತನ್ನ ಮಾತೆಯ ಸ್ತುತಿಯನ್ನು ಗೈದು ಮಹಾಸ್ವಾಮಿಯವರು ಬಾಪುರಾಜನ ಅಭಿಷೇಕಯುಕ್ತವಾದ ಗಂಗಾಜಲವನ್ನು ತುಂಬಿದರು. ವಿಧಿಪೂರ್ವಕ ಗಂಗೆಯನ್ನು ತುಂಬಿ ಮಹಾಸ್ವಾಮಿಯವರು ಭಕ್ತ ಮಲ್ಲಣನನ್ನು ಕರೆದು ಇಂತೆಂದರು. "ಮಗು ಮಲ್ಲಣ್ಣಾ ನಾನು ಹಿಂದಿನಿಂದ ಬರುತ್ತೇನೆ ನೀನು ಮುಂದೆ ಹೋಗಿ ಬಾಪುರಾಜನಿಗೆ ಈ ಪವಿತ್ರ ಗಂಗಾಜಲವನ್ನು ಕೊಡು. ಮತ್ತು ನಾನು ಬರುವವರೆಗೂ ಈ ನೀರನ್ನು ಒಡೆಯಬೇಡವೆಂದು ಹೇಳು." ಎಂದು ಹೇಳಿ ಗಂಗಾಪೂರಿತ ಹೂಜೆಯನ್ನು ಮಲ್ಲಣ್ಣನ ಕೈಯಲ್ಲಿ ಕೊಟ್ಟರು.

ಗುರುವಿನ ಆಜ್ಞೆಯಿಂದಾ ಮಲ್ಲಣನು ಗುರುವಿನ ಇಚ್ಛೆಯಂತೆ ಬಾಪುರಾಜನಿಗೆ ಗಂಗಾಜಲವನ್ನು ಮುಟ್ಟಿಸುವದಕ್ಕಾಗಿ ತೀವ್ರ ಕಿತ್ತೂರ ಹಾದಿಯನ್ನು ಹಿಡಿದನು.

ಗುರುವು ಮಲ್ಲಣನು ಹೋದ ಮೇಲೆ ಕಾಶೀ ವಿಶ್ವನಾಥನಲ್ಲಿಗೆ ಹೋಗಿ ಗಂಗಾಸ್ನಾನ ಪವಿತ್ರತೆಯಿಂದಾ ಶುದ್ಧವಾದ ಮನಸ್ಸಿನಿಂದ ಆತನ ಸ್ತುತಿಯನ್ನು ಮಾಡಲಾರಂಭಿಸಿದನು. ಜಯಜಗತ್ತ್ರಯನಾಥ, ಭಕ್ತಾಶ್ರಯ, ಸದಾಶಿವ, ಸಾಧುವತ್ಸಲ, ಲಯವಿಹೀತ, ಮನ್ಮಥ ಸಂಹರ, ಮಹಾದೇವ, ಭಯರಹಿತ, ಬಾಳಾಕ್ಷ ಲೋಕವ್ಯಯ ಭುವನ, ದುರ್ಲಕ್ಷತ್ರಯನಮಸ್ಕೃತ, ನಿಗಮಸ್ಕೃತ, ಹರಹರಾ, ತ್ರೈಮೂರ್ತಿ, ಕೃಷ್ಣಾಂಭುನಿಧಿ, ಭಕ್ತಾವಲಂಬಿ, ಸೇವಕಪ್ರಿಯ, ಭೂತಬಾವನ, ಭಾವನಾತೀತದೇವ, ಸುರಧನುಜೇಂದ್ರ ವಂದಿತ, ಮನುಮುನಿಕರ ಪೂಜಿತ, ದೇವತಾತ್ವಾಕಾರ, ಬಹುಗುಣನಾಮ, ಲಿಂಗಮಯ, ನಿರ್ಲಿಂಗ, ಲಿಂಗಾತ್ಮಕ, ಮಹಾಲಿಂಗ, ವಿಲಸಿತಲಿಂಗ, ದುರ್ಗಾಲಿಂಗಿತಾಂಗ, ವಿಲಾಶ ಶಂಕರ, ಹರನೇ ಗಂಗಾಧರನೇ, ಗಿರಿಜಾವರನೇ, ಶಶಿಶೇಖರನೆ, ದಕ್ಷಧ್ವಯಹರನೇ ನಿಜಭಕ್ತಮನೋಭಿಷ್ಟನೇ ಕರುಣಿಸು, ಉದ್ಧರಿಸು, ಪೊರೆಎರಗಾಭರಣ ಶ್ರೀ ವಿರೇಶ್ವರಾ ಎಂದು ಪ್ರಾರ್ಥನೆಯನ್ನು ಮಾಡಿದರು. ನಿಗಮಗಳಿಗೆ ನಿಲುಕದ ಪರಶಿವನ ಸ್ತುತಿಯಿಂದ ಮಹಾಸ್ವಾಮಿಗಳವರು ಸಂತೋಷಭರಿತರಾದರು. ವಿಶ್ವನಾಥನ ಕೃಪಾಕಟಾಕ್ಷ ಆಶೀರ್ವಾದವನ್ನು ಪಡೆದು ಸ್ವಾಮಿಯವರು ಕಿತ್ತೂರಾಭಿಮುಖವಾಗಿ ಹೊರಟರು. ಒಮ್ಮೊಂದೊಮ್ಮೆ ದ್ರೋಹ ಚಿಂತನೆಯ ಪ್ರತಿಕಾರ

ಬುದ್ಧಿಯು ಕೋಪಾಗ್ನಿಯು ಪ್ರಜ್ವಲಿಸಿದಂತಾಗಿ ವೈರಾಗ್ಯ ಬಲದಿಂದ ಶಾಂತ ವಾಯಿತು ಆಗ ಸ್ವಾಮಿಯವರು ನಿಶ್ಚಲ ಮನಸ್ಸಿನಿಂದ ವಿಚಾರಿಸಿ ಸಾವಧಾನ ವೃತ್ತಿಯಿಂದಾ ವಿವೇಕ ಪ್ರವರ್ತರಾಗಿ ಶಾಂತತೆಯನ್ನು ತಳೆದರು. ಮತ್ತು ಕಿತ್ತೂರ ಪರಿಯಂತ ಬಂದರು ಇರಲಿ ಮುಂದೆ ಬಂದ ಮಲ್ಲಣನ ಗತಿ ಏನಾಯಿತು ಎಂಬುದನ್ನು ವಿಚಾರಿಸುವಾ. ಮಲ್ಲಣನು ಕಿತ್ತೂರ ಪರಿಯಂತ ಬಂದೊಡನೆಯೇ ಬಾಪುರಾಜನಿಗೆ ಭೆಟ್ಟಿಯಾಗಿ ಆ ಮಹಾಸ್ವಾಮಿಯವರ ಆಶೀರ್ವಾದವನ್ನು ತಿಳಿಸಿದನು. ಮಹಾತ್ಮರನ್ನು ಕೂಡಾ ವಂಚಿಸುವಂಥ ಮಹಾ ನೀಚರು ಭಕ್ತ ಮಲ್ಲಣ್ಣನಿಗೆ ಎಂತು ಹೆದರುವರು ?

ಮಲ್ಲಣನು ಬಂದು ಅವರ ಕೈಯಲ್ಲಿ ಗಂಗಾಜಲಪೂರಿತ ಹೂಜೆಯನ್ನು ಕೊಡುವದೊಂದೇ ತಡ. ಬಾಪುರಾಜನು ಮೊದಲೇ ನಿಶ್ಚಯಿಸಿದಂತೆ ಗುರುದ್ರೋಹವಾದೀತೆಂಬ ಕಲ್ಪನೆಯನ್ನು ಸಹಾ ಮನಸ್ಸಿನಲ್ಲಿ ತಾರದೆ ಗಂಗಾಜಲಪೂರಿತ ಹೂಜೆಯನ್ನು ಒಡೆದನು. ವಾಚಕರೇ ನೋಡಿದಿರಾ! ಗುರುವಾಜ್ಞೆಯನ್ನು ಉಲ್ಲಂಘಿಸುವ ಬಾಪುರಾಜನ ಭಕ್ತಿಗೂ, ಮತ್ತು ಗುರು ಅಜ್ಞೆಯನ್ನು ಅತಿ ಪ್ರೇಮದಿಂದ ಪಾಲನೆ ಮಾಡಿದ ಮಲ್ಲಿಣನ ಭಕ್ತಿಗೂ ಎಷ್ಟು ಅಂತರವಿರುವದು. ಈ ಪ್ರಕಾರ ಯಾರ ಭಕ್ತಿಯು ಹೇಗೋ ಹಾಗೆ ಅವರಿಗೆ ಫಲ. ಬಾಪುರಾಜನು ಗುರುವಿನನ್ನು ವಂಚಿಸಿದ್ದರಿಂದ ಶಾಪಾನುಗ್ರಹವನ್ನು ಪಡೆಯಬೇಕಾಯಿತು. ಮತ್ತು ಮಲ್ಲಣನು ಭಕ್ತಿಯಿಂದ ಗುರುವಿನ ಸೇವೆಯನ್ನು ಮಾಡಿದ್ದರಿಂದಾ ಗುರುವಿನ ಕೃಪಾಪಾತ್ರನಾದನು.

ಈ ಪ್ರಕಾರ ಬಾಪುರಾಜನಿಂದ ಅವಮಾನಿತನಾದ ಮಲ್ಲಣನು ಉಪಾಯವಿಲ್ಲದೆ. ಊರಹಾದೀ ಹಿಡಿದನು ಅವನು ಊರಿಗೆ ಹೋದ ನಾಲ್ಕಾರು ದಿವಸಗಳಲ್ಲಿ ಮಹಾಸ್ವಾಮಿಯವರು ಕಿತ್ತೂರಿಗೆಬಂದರು. ಬಂದು ನೋಡುತ್ತಾರೆ ತಾವು ಯಾವಮಠಕ್ಕೆ ಅಧಿಕಾರಿಯಾಗಿದ್ದರೋ ಆ ಮಠದ ಅಧಿಕಾರವೇ ವ್ಯತ್ಯಾಸವಾಗಿ ಹೋಗಿತ್ತು. ಮತ್ತು ತನ್ನ ಪೂಜ್ಯಪಿತಾಮಹಾರಾದ ಪ್ರಭುಸ್ವಾಮಿಗಳವರ ಗದ್ದುಗೆಯ ಪೂಜೆಯೂ ಕೂಡಾಆಗಿದ್ದಿಲ್ಲಾ. ಇದನ್ನೆಲ್ಲ ನೋಡಿದ ಗುರುವರರು, ಮಹಾದೇವನು ಪ್ರಲಯ ಕಾಲಕ್ಕೆ ರುಧ್ರಾವತಾರ ತಾಳಿದಂತೆ, ತಾವು ಅತಿ ಕೋಪದಿಂದ ಮಠವನ್ನು ಹೊಕ್ಕರು ತನ್ನ ಪೂಜ್ಯ ಪಿತರಾದ ಪ್ರಭು ಸ್ವಾಮಿಗಳವರ ಗದ್ದುಗೆಯ ಮೇಲೆ ಒಬ್ಬ ಸನ್ಯಾಶಿಯು

ಕುಳಿತದ್ದನ್ನು ನೋಡಿದ ಮೇಲಂತೂ ಸಾಕ್ಷಾತದಕ್ಷಾರೀ ಪರಶಿವನು, ಈತನೇ ಸತ್ಯವೆಂದು ಜಗತ್ತಿಗೆ ತೋರಿಸುವ ಹಾಗೆ ಸ್ವಾಮಿಗಳವರ ಕಣ್ಣಿನಿಂದ ಕಿಡಿಗಳು ಉದುರಹತ್ತಿದವು. ಆಗ ಸ್ವಾಮಿಗಳು ಏನೋ! ಏ, ಸ್ವಾಮಿ ನಾನು ಇನ್ನೂ ಜೀವದಿಂದಿರುವಾಗ ನೀನು ಈ ಮಠಕ್ಕೆ ಅಧಿಕಾರಿಯೋ? ಅದು ಹೇಗೆ? ಈ ಪಟ್ಟದಲ್ಲಿ ಕೂಡ್ರಲು ನಿನಗೆ ಅಧಿಕಾರವೇನು? ಸತ್ಯವನ್ನು ಹೇಳುವಿಯೋ ಅಥವಾ ನಿನಗೆ ತಕ್ಕ ಶಿಕ್ಷೆಯನ್ನು ಕೊಡಬೇಕೋ? ಈ ಪರಿ ಗರ್ಜಿಸಿದರು. ಆ ಗುರುವರ ವೀರ ಗರ್ಜನೆಯನ್ನು ಕೇಳಿ ಆ ಪಟ್ಟದ ಮೇಲಿನ ಗಂಧಿಗವಾಡದ ಗುರುಶಿದ್ದನು ಗಾಬರಿಯಾದನು. ಮೊದಲಿಗೇ ತಾನು ಯೋಚಿಸಿದಂತೆ ಮಹಾ ಸಂಕಟ ಬಂದೊದಗಿತೆಂದು ಮನಸ್ಸಿನಲ್ಲಿ ತಿಳಿದು ಕ್ಷಣಕಾಲ ವಿಚಾರಿಸಿ ಗುರುವಿನಲ್ಲಿ ಕ್ಷಮೆ ಬೇಡಲು ನಿರ್ಧರಿಸಿದನು. ಅವನು ಬಹಳ ಹೊತ್ತು ವಿಚಾರಿಸುವದನ್ನು ನೋಡಿ ಮಡಿವಾಳ ಸ್ವಾಮಿಯವರು ಎಲೋ, ಸ್ವಾಮಿ ನಿನ್ನನ್ನು ಪಟ್ಟದ ಮೇಲೆ ಕೂಡ್ರಿಸಿದವರಾರು? ಸತ್ಯವನ್ನು ಹೇಳುವಿಯಾದರೆ ಒಳ್ಳೇದು. ಇಲ್ಲವಾದರೆ ನನ್ನ ಕೈಯಲ್ಲಿರುವ ಖಡ್ಗದಿಂದ ನಿನ್ನ ಶಿರವನ್ನು ಹಾರಿಸುವೆನು. ಎಂದು ಗರ್ಜಿಸಿ ಖಡ್ಗಪಾಣಿಯಾಗಲು ಅವರ ಮುನಿಸಿದರೌದ್ರಾವತಾರಕ್ಕೆ ಆ ಸ್ವಾಮಿಯು ಬೆದರಿದನು. ಆಗ ಆ ಸನ್ಯಾಸಿಯು ಗುರುವೇ ನಾನು ಪಟ್ಟವೇರಲು ಮೊದಲು ಸಮ್ಮತಿಸಲಿಲ್ಲ. ಆ ಊರ ದೈವದವರೂ, ಬಾಪುರಾಜರೂ, ಕೂಡಿ ಜುಲುಮೆಯಿಂದಾ ನನ್ನನ್ನು ಪಟ್ಟಗಟ್ಟಿದರು ಎಂದು ಹೇಳಿದನು. ಆಗ ಮಹಾ ಸ್ವಾಮಿಯವರು ಕ್ಷಣಕಾಲ ಮನಸ್ಸಿನಲ್ಲಿ ವಿಚಾರಿಸಿ "ಎಲಾ ಬಾಪು ನನ್ನನ್ನು ಕೂಡಾ ಈ ಪರಿ ಪಂಚಿಸಿದಿಯಾ" ತಾಳು ಎಂದು ಗರ್ಜಿಸಿ "ದೈವದವರೆಂದರೆ ಯಾರು" ಎಂದು ಕೇಳಿದರು. ಆಗ ಸನ್ಯಾಸಿಯು "ಅವರೇ ಮಲ್ಲಪ್ಪಶೆಟ್ಟಿ ಮತ್ತು ವಿರುಪಾಕ್ಷ ಶರಣರು" ಎಂದು ಪಿಸುಗುಟ್ಟಿದನು. ಆಗ ಸ್ವಾಮಿಯವರು ಈಗ ಅವರೆಲ್ಲರೂ ಎಲ್ಲಿರುವರೆಂದು ಕೇಳಿದರು. ಆಗ ಆ ಸನ್ಯಾಸಿಯು ಗುರುವೇ ಮಲ್ಲಪ್ಪ ಶೆಟ್ಟಿಯು ಕಲ್ಮಠದ ಕೋಶಾಧ್ಯಕ್ಷನಾಗಿಯೂ ವಿರುಪಾಕ್ಷ ಶರಣರು ಕಲ್ಮಠದಕಾರಭಾರಿಯೂ ಆಗಿ ಮೆರೆಯುತ್ತಿರುವರು. ಎಂದು ಹೇಳಿ ಮಹಾ ಸ್ವಾಮಿಗಳವರಿಗೆ ನಮಸ್ಕರಿಸಿ ನಿರಪರಾಧಿಯಾದ ತನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡು ಹೊರಟು ಹೋದನು.

ಮಹಾಸ್ವಾಮಿಗಳವರು ಕಾಶಿಯಿಂದ ತಿರುಗಿ ಬಂದರೆಂಬ ಸುದ್ದಿ ಯನ್ನು ಕೇಳಿದಾಕ್ಷಣವೇ ಬಾಪುರಾಜನಿಗೆ ಈ ಸುದ್ದಿಯನ್ನು ಹೇಳಲು ಮಲ್ಲಪ್ಪ ಶೆಟ್ಟಿಯು ರಾಜವಾಡೆಗೆ ಓಡಿಹೋಗಿದ್ದನು. ನೋಡಿ! ವಾಚಕರೇ! ದುಷ್ಟ ಕಾರ್ಯ ಪ್ರವರ್ತರಾದ ನೀಚರು ಪೂರ್ಣ ಧೈರ್ಯಶಾಲಿಗಳಲ್ಲ. ಯಾವ ಬಾಪುರಾಜನಿಗೆ ಗುರುದ್ರೋಹವನ್ನು ಮಾಡಲು ದುಷ್ಟೋಪದೇಶ ಮಾಡಿ ಅವನಿಂದ ಗುರುದ್ರೋಹವನ್ನು ಮಾಡಿಸಿದ್ದರೋ ಅದೇ ನೀಚರು ಸತ್ಯಕ್ಕೆ ಎದೆಗೊಡಲು ಹೆದರಿ ಬಾಪುರಾಜನಿಗೆ ಕೋಟೆಯ ಬಾಗಿಲವನ್ನು ಹಾಕಿಸು ವಂಥ ನೀಚೋಪದೇಶವನ್ನು ಮಾಡಲು ಈಗ ಪ್ರವರ್ತರಾದರು. "ವಿನಾಶ ಕಾಲೆ ವಿಪರೀತ ಬುದ್ಧಿ" ಎಂಬ ಉಕ್ತಿಯಂತೆ ತನ್ನಾ ವಿನಾಶ ಕಾಲಕ್ಕೆ ಸರಿ ಯಾಗಿ ದುಷ್ಟೋಪದೇಶದಿಂದ ಬಾಪುರಾಜನಿಗೆ ಪ್ರಭುವರರ ಅಪಮಾನ ಮಾಡುವಂಥ ಕೋಟೆಯ ಬಾಗಿಲು ಹಾಕುವ ದುಷ್ಟಕಾರ್ಯಕ್ಕೆ ಪ್ರವರ್ತ ನಾದನು

ಇಂತು ತ್ರಿದುಷ್ಟರು ಕೂಡಿ ತಮ್ಮ ಆಯುಷ್ಯದ ಅಂತ್ಯಕ್ಕೆ ಜ್ಞಾನ ಬಾಗಿಲವನ್ನು ಮುಚ್ಚುವಂತೆ ಶ್ರೀಗುರು ಮಡಿವಾಳೇಶ್ವರರ ಶಾಪಕ್ಕೆ ಸಿಕ್ಕು ಭಸ್ಮೀಭೂತವಾಗಲು ಗುರುವಿನ ಅಪಮಾನಕ್ಕೆ ಕಾರಣವಾದ ಕೋಟೆಯ ಬಾಗಿಲವನ್ನು ಹಾಕಿಸುವಂಥ ದುಷ್ಟಕಾರ್ಯವನ್ನು ಕೈಕೊಂಡರು.

ಇತ್ತ ಪ್ರಭು ಮಡಿವಾಳೇಶ್ವರರು ಮುನಿದ ಪ್ರಳಯ ಕಾಲದ ರುದ್ರ ನಂತೆ ತನ್ನ ಆಜ್ಞಾ ಉಲ್ಲಘಂನ ಮಾಡಿದ ತ್ರಿದುಷ್ಟರ ಸಂಹಾರಕ್ಕಾಗಿ ತ್ರಿ. ಪುರ ಸಂಹಾರಕ್ಕಾಗಿ ಹೊರಟ ಪರಶಿವನಂತೆ ಕಣ್ಣುಗಳಿಂದ ಕಿಡಿಗಳನ್ನುದುರಿ ಸುತ್ತ ಖಡ್ಗಪಾಣಿಯಾಗಿ ಕೋಟೆಯಹಾದಿಹಿಡಿದನು. ಬಾಗಿಲಿಗೆ ಬಂದು ನೋಡುತ್ತಾರೆ ಕೋಟೆಯ ಬಾಗಿಲವು ಹಾಕಿತ್ತು. ಆಗ ಮಹಾಸ್ವಾಮಿ. ಯವರು ಒಳಗೆ ಪ್ರವೇಶ ಮಾಡಲು ಮನಸ್ಸು ಹಾಕದೆ ಮುಚ್ಚಿದ ಕೋಟೆಯ ಬಾಗಿಲದ ದೃಶ್ಯವನ್ನು ಕಂಡುತನ್ನ ಭವಲೀಲೆಯ ರಾಜವೈಭವದ ವೇಷವನ್ನು ಮರೆಮಾಡಲು ಮನಸ್ಸು ಮಾಡಿ ದಿಗಂಬರ ರೂಪಕ್ಕೆ ಮನಸ್ಸು ಹಾಕಿದರು. ಆಗ ಆಗುರುವು ತನ್ನ ಮನಮೀರಿ ಆನೀಚ ತ್ರಿದುಷ್ಟರಿಗೆ ಶಾಪವನ್ನು ಕೊಡಲು ಕೋಟೆಯ ಬಾಗಿಲಮುಂದೆ ನಿಂತು ತನ್ನ ಶಾಪಗ್ರಸ್ಥ ಹಸ್ತ ವನ್ನೆತ್ತಿದನು. ಯಾವಗುರು ಸ್ವರೂಪಿ ಪರಬ್ರಹ್ಮ ಸ್ವರೂಪ ಹಸ್ತವು

ರಕ್ಷಣಾಚ ಸಾಧೂನಾಮ್ ।
ವಿನಾಶಾಯಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾ ರ್ಥಾಯ ।
ಸಂಭವಾಮಿಯುಗೇ ಯುಗೇ ॥ ಶ್ಲೋಕ ॥

ಎಂಬಂತೆ ಪರಿಪಾಲನಾ ಉಪಕಾರಿಯಾಗಿ ಭಕ್ತರ ಕಾಮಧೇನುಕಲ್ಪವೃಕ್ಷ ಸ್ವರೂಪಿಯಾಗಿ ಪರಿಣಮಿಸಿತ್ತೊ ಅಂಥಹದು ಇಂದು ತನ್ನಮನ ಮೀರಿ ಭಕ್ತ ನಾಶಕ್ಕಾಗಿ ಮೇಲಕ್ಕೆದ್ದಿತು. ಯಾವಜಗನ್ಮಂಗಲವನ್ನು ಬೀರುವ ಮಹಾಶುಭದಾಯಕ ಮಹಾತ್ಮಾ ಮಡಿವಾಳೇಶ್ವರರು ಬಾಪು ರಾಜನ ಮನದಿಚ್ಛೆ ಪೂರ್ತಿಗಾಗಿ ಅಮರ ಗಂಗಾಜಲ ತರಲು ವಿಶ್ವನಾಥಪೂರಿಗೆ ಹೋಗಿದ್ದರೋ ಅವೇಗುರುವು ಕೋಪಾವಿಷ್ಠರಾಗಿ ಬಾಪು ರಾಜನಿಗೆ ಶಾಪಕೊಡಲು ಸಿದ್ಧರಾಗಿರುವರು. ಮಡಿವಾಳೇಶ್ವರರು ತಮ್ಮ ವರದಹಸ್ತವನ್ನು ಶಾಪಸೀಡಲು ಎತ್ತಿದಾಕ್ಷಣವೇ ಭೂಮಿ ನಡುಗಲಾರಂಭಿಸಿತು. ತ್ರಿಪುರದಹನಕಾಲಕ್ಕೆ ಪರಶಿವನ ಕೋಪಕ್ಕೆ ನಡುಗಿದ ಭೂಮಿಯಂತೆ ರಾವಣ ಸಂಹಾರಕ್ಕೆ ರಾಮನು ಕೋದಂಡಕ್ಕೆ ಬಾಣವನ್ನು ಹೂಡಿದಾಗ, ದಕ್ಷಯಜ್ಞಕ್ಕೆ ಹೊರಟ ದಾಕ್ಷಾಯಣಿ ಕುಮಾರ ಜನಿತ ಪರಶಿವನ ಫಾಲನೇತ್ರದ ಉರಿಗೆ ಬೆದರಿದಂತೆ ಸಮುದ್ರನಾಥನ ಮಂಥನದಿಂದ ಹೊರಟ ಹಾಲಾಹಲಕ್ಕೆ ಹೆದರಿದಂತೆ ಭೂಮಿಯು ಮಡಿವಾಳೇಶ್ವರರ ಶಾಪಕ್ಕಾಗಿ ಬೆದರಿತು.

ಯಾವ ಭಯವೂ ಇಲ್ಲದೆ ಕೋಟೆಯ ಬಾಗಿಲ ಹಾಕಿದ್ದನ್ನು ನೋಡಿ ಶ್ರೀಗುರುವು. ಸಮುದ್ರನಾಥನಲ್ಲಿ ಪ್ರಜ್ವಲಿಸುವ ವಡವಾಗ್ನಿಯುದಳ್ಳುರಿಯ ಜ್ವಾಲೆಯಿಂದ ಭಸ್ಮವಾಗುವ ವಸ್ತುವಿನಂತೆ ತನ್ನ ಹೃದಯ ನಿವೇದನೆಯ ದಳ್ಳುರಿಯ ಜ್ವಾಲೆಗೆ ಕಿತ್ತೂರ ಸಂಸ್ಥಾನವನ್ನೇ ಸುಟ್ಟು ಸುಡುಬುಗ್ಗೆ ಮಾಡಲು ಮನಸ್ಸು ಮಾಡಿದರು. ಆ. ಶ್ರೀಗುರುವು ತನ್ನ ನೊಂದ ಹೃದಯದಿಂದ ಶಾಪ ಕೋಪಾವಿಷ್ಠರಾಗಿ ತನ್ನ ಹೃದಯ ಜ್ವಾಲೆಯನ್ನು ಕಿಡಿರೂಪದಲ್ಲಿ ಕಿತ್ತೂರ ಕೋಟೆಯಮೇಲೆ ಉಗುಳಲಾರಂಭಿಸಿದನು. ನೋಡಿ ವಾಚಕರೇ ಕರುಣಾಸಮುದ್ರನಾದ ಪರಶಿವನು ಎಷ್ಟು ಶಾಂತನೋ ಅವನು ಮುನಿದರೆ ಅಷ್ಟೇ ಉಗ್ರ ವೃತ್ತಿಯನ್ನು ತಾಳುವನು ಆದರಂತೆ ಬಾಪು ರಾಜನಿಂದ

ಆಚರಿಸಲ್ಪಟ್ಟ ಗುರುದ್ರೋಹದಿಂದ ಪ್ರಜ್ವಲಿಸಿದ ಮಡಿವಾಳೇಶ್ವರರ ಹೃದಯಾಗ್ನಿಯು ಶಾಪರೂಪದಿಂದ ಕಿತ್ತೂರನ್ನು ಸುಡಲನುವಾಯಿತು.

ಗುರುವು ಕೋಪಾವಿಷ್ಟನಾಗಿ ಈ. ಪರಿನುಡಿದನು

ಇಂತು ಶಾಪ ಹಸ್ತವನೆತ್ತಿದ ಗುರುವರರು ಕಿತ್ತೂರ ಭವಿಷ್ಯ ರೂಪರೇಷೆಗಳನ್ನು ತಪ್ತ ಹೃದಯದಿಂದ ಉಸುರಿದರು.

ಗುರುದ್ರೋಹಿ ಬಾಪುರಾಜಾ ವಂಚಿಸಬೇಕೆಂಬ ಕಲ್ಪನೆಯು ನಿನಗೆ ಬಂದಿತೆ ? ಮಾಡುವದೇನು “ಬುದ್ಧಿ ಕರ್ಮಾನುಸಾರಿಣಿ” ಎಂಬತೆ ನಿನ್ನ ವಿನಾಶವವನ್ನು ನಿನ್ನ ಕೈಯಿಂದಲೇ ಮಾಡಿಕೊಂಡಿಯಾ ನನ್ನ ಪೀತ ಪ್ರಭುವರನಿಗೆ ವಚನವಿತ್ತಂತೆ ನಾನು ನಿನ್ನ ಸಂಸ್ಥಾನ ಉಳಿಸಲು ಯಷ್ಟು ಯತ್ನಿಸಿದರೂ. ಕಡೆಗೂ ನೀನು ಆಡಬಾರದೆಂಬ ಇಚ್ಛೆಯುಳ್ಳ ನನ್ನ ಮನಸ್ಸಿನ ವಿರುದ್ಧವಾದ ಮಾತುಗಳನ್ನು ಆಡಲು ಹಚ್ಚಿದಿಯಾ. ಮಹದೇವನ ಮನಸ್ಸಿನಲ್ಲಿಯೋ ನಿನ್ನ ಸಂಸ್ಥಾನ ನಾಶ ಮಾಡಬೇಕೆಂಬ ಇಚ್ಛೆ ಯಿದ್ದರೆ ನಾನೇನು ಮಾಡುವದು ಕೇಳು ನನ್ನ ತಪ್ತ ಹೃದಯದಿಂದ ಹೊರಬೀಳುವ ಶಾಪವನ್ನು ಕೇಳು.

“ಯಾವ ನಿನ್ನ ನೀಚ ಮಿತ್ರರ ಉಪದೇಶದಿಂದ ನೀನು ವಿಚಾರ ಶೂನ್ಯನಾಗಿ ಗುರುದ್ರೋಹವನ್ನು ಮಾಡಲೆಳಿಸಿದಿಯೋ ಅಂಥ ನಿನ್ನ ಸಂಸ್ಥಾನದ ರಾಜವಾಡೆಯಲ್ಲಿ ಕತ್ತೆ ನಾಯಿ ನರಿಗಳು ಅಡ್ಡಾಡಲಿ ಗುರುದ್ರೋಹವೆಂಬ ಬಿರುಗಾಳಿಯಿಂದ ನಿನ್ನ ವಂಶದ ನಂದಾದೀಪವು ನಂದಿಹೋಗಲಿ ಯಾವ ನಿನ್ನ ನೀಚ ವೃತ್ತಿಯ ಕಪಟಭಾವವನ್ನು ತಿಳಿದು ನಿನಗೆ ದುರ್ಮಾರ್ಗಿಯಾಗಬೇಡವೆಂದು ನಿನ್ನ ಮಾತೆ ಚನ್ನಮ್ಮಾಜಿಯು ಉಪದೇಶ ಮಾಡಿದಳೋ ಅಂಥ ಮಹಾತಾಯಿಯು ಶೌರ್ಯದ ಪ್ರಖರ ತೇಜವು ದೇಶ ಪರದೇಶಿಗರ ಕಣ್ಣು ಕುಕ್ಕಿಸಲಿ ಸೂರ್ಯ ಚಂದ್ರಾದಿಗಳಿರುವವರೆಗೆ ಕನ್ನಡ ಮಾತೆ ತಿಲಕಪ್ರಾಯವಾದ ಕಿತ್ತೂರ ವೀರ ರಾಣಿಯೆಂಬ ಹೆಸರು ಮುಂದೆ ಜನಿಸುವ ಕನ್ನಡ ಮಕ್ಕಳ ಹೃದಯದಲ್ಲಿ ನಿನಾದಿಸಲಿ ಯಾವ ಪಾಪಾತ್ಮನು ಈಗ ನಿನಗೆ ಗುರುದ್ರೋಹ ಮಾಡಬಯಸಲಿಕ್ಕೆ ಹಚ್ಚಿದನೋ ಅವನೇ ಪರರ ಕೈಯಲ್ಲಿ · ಕಿತ್ತೂರ ಸಂಸ್ಥಾನ ವೃಕ್ಷವನ್ನು ಕತ್ತರಿಸುವ ಕಠಾರವಾಗಲಿ ಮತ್ತು ಜಗದ ನೀಚರ ಮಾಲಿಕೆಯಲ್ಲಿ ಶಿರೋಭೂಷಣನಾಗಿ ಕಿತ್ತೂರ ಜನರು

ಕಣ್ತೆರೆದು ನೋಡುವಂತೆ ಮರಣ ಕಾಲಕ್ಕೆ ಘೋರಯಾತನೆ ಅನುಭವಿಸಲಿ ಯಾವ ಕಿತ್ತೂರು ನನ್ನ ಪೂಜ್ಯ ಪಿತಾಮಹ ಶ್ರೀಗುರು ಮುದಿ ಮಡಿವಾಳೇಶ್ವರ ವರದಿಂದ ಗಿಜಗನ ಹಳ್ಳಿಯಿಂದ ಕಿತ್ತೂರಲ್ಲಿ ಸ್ಥಾಪಿಸಲ್ಪಟ್ಟ ಕನ್ನಡಿಗರ ಅಭಿಮಾನಾಸ್ಪದ ಸಂಸ್ಥಾನವನ್ನು ನಾಶಮಾಡಬಾರದೆಂಬ ಇಚ್ಛೆಯಿಂದ ಇಲ್ಲಿಯವರೆಗೆ ತಡೆದಿದ್ದೆ. ಆದರೆ ಕಾಲಚಕ್ರದ ತೀವ್ರ ಗತಿಯ ನಿರ್ಯಾತಕ್ಕೆ ಬಲಿಯಾಗಲಿರುವ ನಿನ್ನ ಅವಸಾನಕ್ಕೆ ನಾನೇನು ಮಾಡಲಿ ನಿನ್ನ ವಿನಾಶ ಕಾಲಕ್ಕೆ ಹುಟ್ಟಿದ ಗುರುದ್ರೋಹದ ವಿಪರೀತ ಬುದ್ಧಿಗೆ ನಾನೆಂತು ತಡೆ ಹಾಕಲಿ ತಂದೆಯ ವಚನದಂತೆ ನಾನು ರಕ್ಷಿಸಲೆತ್ನಿಸಿದೆ ಆದರೆ ಉಪಾಯವಿಲ್ಲಾ. ನಿನ್ನ ನೀಚ ವೃತ್ತಿಯ ಪ್ರಾಯಶ್ಚಿತ್ತ ಭೋಗಿಸುವದು ನನ್ನ ಕುಪಿತ ಹೃದಯದ ಕಡೆಯ ವಾಕ್ಯ.

ನಿನ್ನ ಗುರುದ್ರೋಹದ ಜ್ವಾಲೆಯಿಂದ ದಹಿಸಿದ ತೀವ್ರ ಮರಣದ ನಂತರ ನಿನ್ನ ಮಾತೆಯು ಕೀರ್ತಿಯಿಂದ ಜಗಜೆಳಗಿ ನಿನ್ನ ಸಂಸ್ಥಾನ ಪರರ ಪಾಲಾಗಲಿ.

ಈ ಪರಿ ಪರಬ್ರಹ್ಮ ಸ್ವರೂಪಿ ಗುರುವರರು ತಮ್ಮ ಹೃದಯದ ಆಂದೋಲನವನ್ನು ಹೊರಗೆಡವಿ ಕ್ರಾಂತಿಯಾದ ನಂತರ ಶಾಂತ ಪರಿಸ್ಥಿತಿಯು ಹುಟ್ಟುವಂತೆ ಶಾಂತ ಮನಸ್ಕರಾಗಿ ತಾನು ಯಾರು ? ತಮ್ಮ ಕರ್ತವ್ಯವೇನು ! ತಮ್ಮ ಅವತಾರದ ಗುರಿಯು ಯಾವದು ! ಎಂದು ವಿಚಾರಿಸಿ ಕ್ಷಣಕಾಲ ಮೌನದಿಂದಿದ್ದು ತಮ್ಮೆದುರಿಗೆ ಕಾಣುವ ಕೋಟೆಯ ಮಹಾದ್ವಾರವು ಮುಚ್ಚಿದ್ದನ್ನು ಕಲ್ಪಿಸಿ ಭವಭಂಧನಾತೀತರಾದ ಅನುಭವ ಕುಮಾರ ಮಡಿವಾಳೇಶ್ವರರು ತಮ್ಮ ಭವಲೀಲೆಯ ಬಾಗಿಲ ಮುಚ್ಚಿ ವಿರಕ್ತಪ್ರಪಂಚಕ್ಕೆ ಮನಸ್ಸು ಮಾಡಿದರು. ತಮ್ಮ ಕ್ರೋಧ ಸಂತಪ್ತ ಹೃದಯದ ಆಂದೋಲನದ ಜ್ವಾಲೆಯಲ್ಲಿ ಕಿತ್ತೂರು ಸುಟ್ಟು ಸುಡುಬುಗ್ಗೆ ಮಾಡುವ ಮುನಿದ ಪ್ರಳಯ ಕಾಲನ ಫಾಲನೇತ್ರದ ದಳ್ಳುರಿಯ ಸ್ವರೂಪಿ ವಾಕ್ಯಗಳನ್ನುಸುರಿದ್ದಕ್ಕಾಗಿ ತಳಮಳಿಸಿ ಹೃದಯಕ್ಕೆ ಪ್ರಾಯಶ್ಚಿತ್ತ ಕೊಡಲು ನಿರ್ಧರಿಸಿದರು. ಆ ನಂತರ ಮಹಾಗುರುಗಳು ತಮ್ಮ ವೈರಾಗ್ಯದ ಬಟ್ಟೆ ಬರೆಗಳನ್ನು ಒಟ್ಟುಗೂಡಿಸಿ ಮಹಾದ್ವಾರದ ಮುಂದೆ ಇಟ್ಟು ಅವುಗಳಿಗೆ ಅಗ್ನಿ ಸಂಸ್ಕಾರ ಮಾಡಿ ಮತ್ತೊಮ್ಮೆ ಬಾಪುರಾಜಾ ! ಸನ್ಯಾಸಿಯನ್ನು ತಡವಿದರೆ ಮೈಯಲ್ಲ ಬೂದಿ

ಎಂಬ ನೀತಿಯನ್ನು ತಿಳಿಯದಲೇ ನನ್ನ ದ್ರೋಹವನ್ನು ಕಟ್ಟಿಕೊಂಡು ಸರ್ವ ನಾಶ ಮಾಡಿಕೊಂಡೆ ನನ್ನನ್ನು ಸರ್ವಸ್ವ ಘಾತ ಮಾಡಿದಿ ಎಂದು ನುಡಿದು ಆ ಬಟ್ಟಿಯ ಬೂದಿಯನ್ನು ಮೈಯ್ಯಲ್ಲ ಬಡಿದುಕೊಂಡು ಜಗದ್ವಂದ್ಯ, ಜಗ ಪೂಜ್ಯ, ದಿಗಂಬರ ರೂಪವನ್ನು ಧರಿಸಿ ಮಹಾಸ್ವಾಮಿಯವರು ಬೆಳವಡಿಯ ದಾರೀ ಹಿಡಿದರು.

ನೋಡಿ ವಾಚಕರೇ, ಕಿತ್ತೂರ ಕಲ್ಮಠಾದಿಕಾರಿಯಾಗಿ, ರಾಜಗುರು ವಾಗಿ ಭೂಮಿಯಲ್ಲಿ ಅತಿ ವೈಭವ ಶಿಖರಕ್ಕೆ ಮುಟ್ಟಬೇಕೆಂಬ ಆಸೆಯುಳ್ಳಾ ಮಡಿವಾಳೇಶ್ವರರು ದಿಗಂಬರ ರೂಪ ಧರಿಸಬೇಕಾಯಿತು. ಸೃಷ್ಟಿಯಲ್ಲಿ ಪರಮಾತ್ಮನ ಕೃಪೆ, ಅವಕೃಪೆಗಳು ಸುಕೃತ ದುಷ್ಕೃತಕ್ಕೆ ಮೂಲ ಕಾರಣಗಳು. ಕಾರಣ ಜಗನ್ಮೂಲ ತತ್ವದ ಜಗತ್ತಿನಲ್ಲಿ ಜ್ಞಾನೋದಯಕ್ಕಾಗಿ ಆತ್ಮಪರಿ ವರ್ತಿಸಿ ತಮ್ಮ ಹೃದಯ ಭಾವ ಜಗಕ್ಕೆ ತೋರಿಸಲು ದೇಹದ ಪರಿವೆಯನ್ನೂ ಮರೆತು ದಿಗಂಬರ ರೂಪ ಧಾರಣ ಮಾಡಿದ ಮಡಿವಾಳೇಶ್ವರರ ಭಾವವು ಯಾರಿಗೆ ತಿಳಿದಿತ್ತು. ಅದಕ್ಕಂತಯೇ—

ಸ್ತ್ರೀಯಶ್ಚರಿತ್ರಂ ಪುರುಷಸ್ಯ ಭಾಗ್ಯಂ. "ದೇವೋನ ಜಾನಾತಿ ಕುತೋ ಮನುಷ್ಯ" ಎಂದು ಬಲ್ಲವರು ಹೇಳುವರು. ಇದನ್ನರಿತ ಮಾನವರೇ ಮನುಷ್ಯರು.

## ವಿದ್ಯಾಭ್ಯಾಸ.

ವರ ದಿಗಂಬರ ರೂಪ ಧರಿಸುತೆ।
ಪರಮ ಪರಶಿವ ಪುತ್ರ ಗೆಲಿದನು।
ಧರೆಯ ಪಂಡಿತ ಸಭೆಯನಾ ವಿಶ್ವೇಶ ಪುರದೊಳಗೆ॥

ಈ ರೀತಿ ತನ್ನ ತಪ್ತ ಆತ್ಮದ ಆಂದೋಲನದ ಬೆಂಕಿಯಿಂದ ಪುಟಹಾಕಿ ಶುದ್ಧ ಮಾಡಿದ ಆತ್ಮದಿಂದ ದಿಗಂಬರ ರೂಪ ಧರಿಸಿದ ಮಡಿವಾಳೇಶ್ವರರು ಒಳಗಿನಿಂದ ಅವರ ರೂಪ ನೋಡುತ್ತಿರುವ ತ್ರಿದುಷ್ಟ ವರ್ಗಕ್ಕೆ ಹುಚ್ಚರಂತೆ ಕಂಡರು. ಕಾಣದೇನು ಮಾಡ್ಯಾರು. ಮಾನವನ ಮನದ ಬಿಂಬವೇ ಅವನ ಅಂತರಾತ್ಮನ ಆತ್ಮೀಯ ತೇಜಸ್ಸಿನ ಭಾವವನ್ನು ಹೃದಯ ಪಟಲದ ಮೇಲೆ ಒಡಮೂಡಿಸಿ ನುಡಿಸುತ್ತದೆ.

ಈಗ ನಮ್ಮ ಚರಿತ್ರೆಯಲ್ಲಿ ನಡೆದಿರುವ ವಿಷಯವನ್ನೇ ವಿಚಾರಿಸಿದರೆ ದುಷ್ಟ ಕಲ್ಪನಾಪೂರಿತ ಹೃದಯದ ದುಷ್ಟರ ಭಾವಕ್ಕೆ ಮಹಾತ್ಮಾ ಮಡಿವಾಳೇಶ್ವರರು ಹುಚ್ಚರಂತೆ ಭಾಸವಾಗಲಿಲ್ಲವೇ. ಸತ್ಯವನ್ನು ವಿಚಾರಿಸಿದರೆ ತನ್ನ ದೇಹದ ಆಶೆ ತೊರೆದು ಮುಕ್ತಿಮಾರ್ಗದ ಪ್ರಥಮ ಮೆಟ್ಟಲಾದ ದಿಗಂಬರ ರೂಪವನ್ನು ಧರಿಸಿದ ಮಹಾತ್ಮರ ಮಹಿಮೆಯು ಭಾವವು ದುಷ್ಟರಿಗೆ ಹೇಗೆ ಹೊಳೆಯಬೇಕು.

ಇದು ಮಾನವನಲ್ಲಿ ಸಹಜ ಭಾವನೆ "ಆತ್ಮವೃತ್ತ ಸರ್ವಭೂತಾನಿ" ಎಂಬಂತೆ ತನ್ನಂತೆ ಸಕಲ ಜಗತ್ತು ಎಂದು ಕಲ್ಪಿಸುವದು. ಹಿಂದಕ್ಕೆ ಮಹಾಭಾರತದ ಕಾಲಕ್ಕೆ ದುರ್ಯೋಧನನ ದೃಷ್ಟಿಯಲ್ಲಿ ಸಕಲರೂ ದುಷ್ಟರಂತೆ ಭಾಸವಾಗುತ್ತಿದ್ದರು. ಅದೇ ಸತ್ಯಸಂಧನಾದ ಧರ್ಮನ ದೃಷ್ಟಿಯಲ್ಲಿ ಜಗತ್ತಿನಲ್ಲಿ ಶತೃಗಳೇ ಕಾಣುತ್ತಿರಲಿಲ್ಲಾ. ಅಂತೆಯೇ ಅವನು ಅಜಾತ ಶತೃವೆಂದು ಹೆಸರು ಪಡೆದನು.

ಇಂತು ಹುಚ್ಚರಂತೆ ಭಾಸವಾದ ಮಹಾಸ್ವಾಮಿಯವರನ್ನು ಬೆನ್ನಟ್ಟಬೇಕೆಂಬ ಹುಚ್ಚಿನಿಂದ ಬಾಪುರಾಜನು ತಮ್ಮ ದಿಗಂಬರ ರೂಪದಿಂದ ಬೆಳವಡಿಯ ಹಾದಿ ಹಿಡಿದ ಮಹಾತ್ಮಾ ಮಡಿವಾಳೇಶ್ವರರನ್ನು ಹಿಡಿದು ತರಲು ತನ್ನ ಸೈನ್ಯಕ್ಕೆ ಆಜ್ಞಾಪಿಸಿದನು. ನೋಡಿದಿರಾ ಮಹಾ ಋಷಿಗಳ ಘೋರ ತಪಶ್ಚರ್ಯದ ಭಕ್ತಿ ಭಾವಕ್ಕೆ ನಿಲುಕದ ಮಹಾದೇವನ ಅನಂತ ರೂಪವನ್ನು ಒಬ್ಬ ಅರಸನ ಸೈನ್ಯವು ಹಿಡಿಯಲು ಸಾಧ್ಯವಾದೀತೆ? ಛೇ ಎಂದೂ ಸಾಧ್ಯವಿಲ್ಲ ಯಾಕಂದರೆ ತನ್ನ ಅನಂತ ಲೀಲೆಗಳ ಪ್ರಭಾವಶಕ್ತಿಯಿಂದ ಜಗತ್ತಿನ ಪ್ರಳಯವನ್ನೇ ಹುಟ್ಟಿಸುವ ಜಗದಂತರಾತ್ಮಾ ಜಗದೀಶನು ಬಾಪುರಾಜನ ಸೈನ್ಯಕ್ಕೆ ಭಯಪಡಲು ಸಾಧ್ಯವೇ ಮಹಾಸ್ವಾಮಿಯವರ ಹಿಂದಿನಿಂದ ಬೆನ್ನು ಹತ್ತಿದ. ಬಾಪು ರಾಜನ ಸೈನ್ಯವು. ಅಲ್ಲಿಂದ ನಾಲ್ಕಾರು ಮೈಲು ದೂರ ಇರುವ ನಂದೆಳ್ಳ ಎಂಬ ಗ್ರಾಮದ ಹತ್ತರ ಮಹಾಸ್ವಾಮಿಯವರಿಂದ ಹೊಡತತಿಂದು ಹಿಂದು ತಿರುಗಿತು ಮುಂದೆ ಮಹಾಸ್ವಾಮಿಯವರು ತೀವ್ರ ಬೆಳವಡಿಗೆ ಬಂದು ತಲುಪಿದರು. ಅವರು ಮಲ್ಲಣ್ಣನ ಮನೆಗೆ ಬಂದು ಮಲ್ಲಣ್ಣಾ ಎಂದೂ ಕೂಗಿದರು-ಆಗ ಆ ಭಕ್ತವರನು ಹೊರಗೆ ಬಂದು ನೋಡುತ್ತಾನೆ.

ಭಕ್ತ ಮಲ್ಲಣ್ಣ ಎಂದ ಕೂಡಲೆ ನಮ್ಮ ವಾಚಕರು ಸಲ್ಪ ಆಶ್ಚರ್ಯ ಹೊಂದಬಹುದು ಹಿಂದೆ ಮಹಾತ್ಮಾ ಮಡಿವಾಳೇಶ್ವರರು ಬಾಪುರಾಜನ ಇಚ್ಛಾ ಪೂರ್ತಿಗಾಗಿ ಕಾಶಿಗೆ ಗಂಗಾಜಲವನ್ನು ತರಲಿಕ್ಕೆ ಹೊರಟಾಗ ಅವರೊಡನೆ ಕಾಶಿಗೆ ಹೋಗಿದ್ದ. ಮಲ್ಲಣ್ಣನೇ ಈ ಮಲ್ಲಣ್ಣನು ಮೇಲೆಹೇಳಿದಂತೆ ಮಲ್ಲ ಣ್ಣನು ಹೊರಗೆ ಬಂದು ನೋಡುತ್ತಾನೆ ರಾಜೈಶ್ವರ್ಯ ಭೋಗಯುಕ್ತ ನಾದ ರಾಜಗುರುವು ದಿಗಂಬರ ರೂಪದಲ್ಲಿ ಕೂಡಲೇ ಅವನ ಮನಸ್ಸಿನಲ್ಲಿ ಏಕೆ ಎಂಬ ಭಾವಹುಟ್ಟಿತು. ಆಗ ಅವನು ತಂದೆಯೇ ಇದೇನು ಹೀಗೇಕೆ ನಿನ್ನ ದೇಹದ ಸ್ಥಿತಿಯು ಹೀಗೇಕೆ ಎಂದು ಸಾಷ್ಟಾಂಗ ನಮಸ್ಕರಿಸಿದನು. ಮಲ್ಲಣನಿಂದ ಸತ್ಕರಿತರಾದ ಮಹಾಗುರುವರು ಮಲ್ಲಣನಿಗೆ ಈ ರೀತಿ ಆಜ್ಞಾಪಿಸಿದರು.

ಮಗು ಮಲ್ಲಣ್ಣಾ ನೀನು ಕಾಶಿಯಿಂದ ಬಂದ ಮೇಲೆ ನಾನು ಹಿಂದಿ ನಿಂದ ಬಂದನಂತರ ಮೊದಲೇ ಯೋಚಿಸಿದ. ಪಾಪಿಗಳ ಬಲೆಯಲ್ಲಿ ಸಿಲು ಕದೆ ನಾನು ಅವರ ನೀಚವೃತ್ತಿಗೆ ಪ್ರಾಯಶ್ಚಿತ್ತವನ್ನು ಕೊಟ್ಟು ಇಲ್ಲಿಗೆ ಬಂದೆ. ಮಹಾಸ್ವಾಮಿಯವರು ಮಲ್ಲಣ್ಣನಿಗೆ ಮಗು ನಾನು ಹೇಳಿದಂತೆ ನನ್ನನ್ನು ವೀರೇಶನ ಗುಡಿಯಲ್ಲಿ ಕೀಲಿ ಹಾಕು. ಹೂಗಾರನಿಗೆ ಹೇಳಿ ಒಂದು ಹೂಮಾಲೆಯನ್ನು ಮಾಡಿಸು ಒಂದು ಬೇಡಿಯನ್ನು ತರಿಸಿ ನನ್ನ ಕಾಲಲ್ಲಿ ತೊಡಿಸು ಅನಂತರ ನಾನು ಗರ್ಭಗುಡಿಯಲ್ಲಿ ಮಲಗಿದ ನಂತರ ಹನ್ನೊಂದು ದಿವ್ಸ ಎಂಥಹ ಪ್ರಸಂಗ ಬಂದರೂ ಗುಡಿಯ ಬಾಗಿಲ ತೆರೆಯು ಬೇಡಾ ಎಂದು ಹೇಳಿದರು.

ನೋಡಿ ವಾಚಕರೇ, ಮಹಾದೇವರ ಆಜ್ಞೆಯಿಂದ ಭವದ ಜನರಿಗೆ ಶಿವಸಾನ್ನಿಧ್ಯವನ್ನು ತೋರಲು ಮಾರ್ಗದರ್ಶಿಯಾದ ಮಹಾಗುರುವು ಮೋಕ್ಷ ಪದದ ಮುಖ್ಯ ಸಾಧನದ ಮೊದಲನೇ ಮೆಟ್ಟಲಾದ ಏಕಾಂತವಾಸವನ್ನು ಬಯಸಿದರು. ತಮ್ಮ ಇಚ್ಛೆಯನ್ನು ಪೂರ್ತಿಗೊಳಿಸಲು ದೇವಾಧಿ ದೇವನು ತನ್ನ ಲೀಲೆಯನ್ನು ಜಗತ್ತಿಗೆ ತೋರಿಸಲು ವೀರೇಶನ ಗುಡಿಯಲ್ಲಿ ಏಕಾಂತ ವಾಸಕ್ಕೆ ಮನಸ್ಸು ಮಾಡಿದರು.

ಮಹಾಸ್ವಾಮಿಯವರ ಇಚ್ಛೆಯಂತೆ ಭಕ್ತ ಮಲ್ಲಣ್ಣನು ತನ್ನ ಮನಸ್ಸಿ ನಿಂದ ಸರ್ವಸಿದ್ಧತೆ ಮಾಡಿ ಗುರುಕಾರ್ಯವನ್ನು ಭಕ್ತಿಯಿಂದ ಪೂರ್ತಿಗೊಳಿ

ಸಿದನು. ಮಹಾಸ್ವಾಮಿಯವರ ಸಿದ್ಧತೆಯಾದ ನಂತರ ೨–೩ ದಿವಸಗಳ ನಂತರ ಮೂರ್ಖ ಶಿರೋಮಣಿ ಬಾಪುರಾಜನಾಜ್ಞೆ ಪ್ರೇರಿತ ಸೈನ್ಯವು ಬೆಳವಡಿಗೆ ಬಂದು ಭಕ್ತ ಮಲ್ಲಣ್ಣನಿಗೆ ಗುರುವನ್ನು ತೋರಿಸುವದಕ್ಕಾಗಿ ತ್ರಾಸು ಕೊಡಲಿಕ್ಕೆ ಹತ್ತಿದರು. ಎಂಥ ಕಷ್ಟ ಬಂದರೂ ಗುರುವಿನ ರಕ್ಷಣೆಗೆ ಮಲ್ಲಣ್ಣನು ಸಹಿಸಿದನು. ಸಕಲ ಪ್ರಯತ್ನಮಾಡಿ ನಿಷ್ಫಲರಾದ ಸೈನಿಕರು ಉಪಾಯವಿಲ್ಲದೆ ಹಿಂದಿರುಗಿದರು.

ನೋಡಿ ವಾಚಕರೇ, ನಮ್ಮ ಭಕ್ತ ಮಲ್ಲಣ್ಣನ ಭಕ್ತಿಯನ್ನು ಪ್ರಾಣಕ್ಕಿಂತಲೂ ಅಧಿಕವಾದ ಗುರುವಿನ ರಕ್ಷಣಕ್ಕಾಗಿ ಪ್ರಾಣ ಕೊಡಲಿಕ್ಕೂ ಸಹ ಸಿದ್ಧನಾದನು.

ಭಕ್ತವರ ಮಲ್ಲಣನು ಸಹಿಸುತೆ |
ಯುಕ್ತಿಯಿಂದಲಿ ಕಾಯ್ದನಾದಿನ |
ಮುಕ್ತಿಮಾರ್ಗದ ಪರಮ ಗುರುವರನ ಭಕ್ತಿಯಲಿ ||

ಭಕ್ತಿ ಪುರಸ್ಕರವಾಗಿ ಗುರುವಿನ ಸೇವೆಯನ್ನು ಮಾಡಿದರೆ ಗುರುವು ತಾನಾಗಿಯೇ ವಲಿಯುವನು ಎಂಬ ಭಾವದಂತೆ ಏಕೋಭಾವದಿಂದ ಪೂಜಿಸಿದ ಭಕ್ತನ ಭಕ್ತಿಗೊಲಿದು ದೇವರು ಅವನ ದಾಸಾನು ದಾಸನಾಗುವನು. ಈಪರಿ ೧೧ ದಿವ್ಸ ಅವರ ಪೀಡೆಗಳನ್ನು ಸಹಿಸುತ್ತ ಹನ್ನೆರಡನೇ ದಿವ್ಸಕ್ಕೆ ವೀರೇಶನ ಗುಡಿಯ ಬಾಗಿಲವನ್ನು ತೆರೆದು ನೋಡುತ್ತಾರೆ ಗುರುವು ಮಾಯವಾಗಿದ್ದನು. ಗುರುವು ಮಾಯವಾದದ್ದನ್ನು ನೋಡಿ ಮಲ್ಲಣ್ಣನು ಮೊದಲು ವಿಷಾದಪಟ್ಟನು. ಆದರೆ ಗುರುವಿನ ಅನಂತ ಲೀಲೆಗಳನ್ನು ಬಲ್ಲ ಆ ಭಕ್ತನು ಗುರುವಿನ ಮಾಯೆಯನ್ನು ಕಂಡು ಆನಂದ ಭರಿತನಾದನು. ಜಗತ್ತಿನ ಚರಾಚರ ವಸ್ತುಗಳನ್ನೇ ಬಂಧಿಸಲು ಸಾಧ್ಯವುಳ್ಳ ಪರಮಾತ್ಮನು ಪರಾಧೀನನಾಗುವದು ಸಾಧ್ಯವೇ.

ಮಹಾಸ್ವಾಮಿಯವರು ಅಲ್ಲಿಂದ ಮಾಯವಾದ ನಂತರ ತಮ್ಮ ಯೋಗ ಸಾಧನದ ಶಕ್ತಿಯನ್ನು ಬಲಪಡಿಸುವದಕ್ಕಾಗಿ ಸೊಗಲಪುರದಲ್ಲಿ ವಾಸ ಮಾಡಲಾರಂಭಿಸಿದರು. ಸೊಗಲಪುರವೆಂದರೆ ನಮ್ಮ ಕರ್ನಾಟಕದ ಕುಂದರ ನಾಡಿನ ಕನ್ನಡಿಗರ ಕೈಲಾಸವೆಂದರೆ ತಪ್ಪಾಗಲಿಕ್ಕಿಲ್ಲ.

ದಕ್ಷಯಜ್ಞಕ್ಕೆ ಆಹುತಿಯಾದ ಜಗನ್ಮಾತೆ ದಾಕ್ಷಾಯಿಣಿಯ ಮರಣಾನಂತರ ವಿರಕ್ತಭಾವ ತಳೆದು ಪರಶಿವನು ಕೈಲಾಸಗಿರಿಯಲ್ಲಿ ತಪಶ್ಚರ್ಯಕ್ಕೆ ಕುಳಿತ ನಂತರ ಅವನ ವರಪ್ರಸಾದದ ಬಲದಿಂದ ಮೆರೆಯುವ. ತಾರಕಾಸುರ ಮೊದಲಾದ ರಾಕ್ಷಸರ ವಧೆಗಾಗಿ ಉದಯಿಸುವ ಕುಮಾರ ದೇವಸೇನಾಪತಿಗಾಗಿ ದೇವತೆಗಳಿಂದ ಪ್ರೇರಿಸಲ್ಪಟ್ಟ ಕಾಮನ ಪಂಚಬಾಣಾಘಾತದಿಂದ ತೆರೆಯಲ್ಪಟ್ಟವು. ಪರಶಿವನ ಫಾಲನೇತ್ರಕ್ಕೆ ಕಾಮನು ಸುಟ್ಟು ಬೂದಿಯಾದನು. ದೇವತೆಗಳಿಗಾಗಿ ಪ್ರಾಣಕೊಟ್ಟ ಕಾಮನಿಗಾಗಿ ಅವನ ಸತಿಯು ಪರಶಿವನಲ್ಲಿ ಮೊರೆಯಿಡಲು ಆಗ ನಾರದನಿಂದ ಪ್ರೇರಿತರಾದ ದೇವತೆಗಳು ಶಿವನ ಲಗ್ನಕ್ಕಾಗಿ ಪಾರ್ವತಿಯಿಂದೊಡಗೂಡಿ ಬೇಡಿಕೊಂಡಾಕ್ಷಣವೇ ರತಿಗೆ ವರವಿತ್ತ ಶಿವನು ಗೌರಿದೇವಿ ಲಗ್ನವಾದ ಪುಣ್ಯಸ್ಥಾನವೆಂದು ಹೇಳುತ್ತಾರೆ. ಆದಕ್ಕಾಗಿಯೇ ಇದು ಶಿವನ ಕೈಲಾಸ ಎಂದು ಹೇಳಲಿಕ್ಕೆ ಅಡ್ಡಿಯಿಲ್ಲಾ.

ಇಂಥ ಪವಿತ್ರ ಸ್ಥಾನದಲ್ಲಿ ಸ್ವಾಮಿಯವರು ಹನ್ನೊಂದು ದಿವ್ಸ ನಿರಾಹಾರ ತಪಶ್ಚರ್ಯ ಮಾಡಿ ತಮ್ಮ ಯೋಗಬಲ ಬೆಳಿಸಿ, ಮುಂದೆ ತಮ್ಮ ದೇಹಕ್ಕೆ ದೇಶಸಂಚಾರದ ಶಿಕ್ಷೆ ಕೊಡಲಿಕ್ಕೆ ಮನಸ್ಸಿನಲ್ಲಿ ನಿಶ್ಚಯಿಸಿದರು. ಅಲ್ಲಿಂದ ಮಹಾಸ್ವಾಮಿಯವರು ಬೆಳವಡಿಗೆ ಬಂದು ವೀರೇಶನ ಗುಡಿಯಲ್ಲಿ ಸಮಾರಾಧನೆ ಮಾಡಿಸಿ ಗುಡಿಯ ಮೇಲೆ ಒಂದು ಕೊಡ ರೂಪಾಯಿಗಳನ್ನು ಸುರುವಿಸಿ ಅಂತ್ಯಜರಿಗೆ ಆರಿಸಲಿಕ್ಕೆ ಹೇಳಿ ಅಲ್ಲಿಂದ ಕಾಶಿಗೆ ಹೊರಟರು.

ಶ್ರೀಗುರು ಮಡಿವಾಳ ಶಿವಯೋಗಿಗಳು ದೇಶಪರ್ಯಟನ ಕಾರ್ಯ ಕೈಕೊಂಡು ಕಾಶಿಗೆ ಪ್ರಯಾಣ ಬೆಳಸಿದರು. ಅಲ್ಲಿ ವಿಶ್ವೇಶ ಸನ್ನಿಧಾನದಲ್ಲಿ ಕೆಲಕಾಲ ಕಳೆದು ತಮ್ಮ ವಿದ್ಯಾವ್ಯಾಸಂಗ ಸಾಗಿಸಬೇಕೆಂಬ ಇಚ್ಛೆಯಿಂದ ಅಲ್ಲಿಯೇ ವಿದ್ಯೆಗೆ ಆರಂಭಿಸಿದರು ವಿದ್ಯಾರಂಭದ ಕೆಲಕಾಲ ನಂತರ ಅವರು ತಮ್ಮ ವಿದ್ಯಾಶಕ್ತಿಯ ಪ್ರಭಾವದಿಂದ ಜಗತ್ತನ್ನೇ ಬೆಳಗಲಾರಂಭಿಸಿ ಕಾಶಿಯಲ್ಲಿ ವಿದ್ಯಾವಂತರೆಂದು ಹೆಸರು ಪಡೆದರು. ಅವರು ವೇದ ಶಾಸ್ತ್ರ ಮಿಮಾಂಶೆಗಳಲ್ಲಿ ಪಾರಂಗತೆಯನ್ನು ಪಡೆದು ಅಲ್ಲಿ ಪಂಡಿತರ ಮುಖ್ಯರೆನಿಸಿ ಕೊಳ್ಳಲಿಕ್ಕೆ ಹತ್ತಿದರು. ಜಗತ್ತಿನಲ್ಲಿ ಯಾವ ಮಾನವನಿಗಾದರೂ ನಿಂದಕರು ಇದ್ದೇ ಇರುವರು. ಅವರ ನಿಂದೆಯಿಂದ ಮಾನವನ ಗುಣ ಪರೀಕ್ಷೆ

ಯಾಗಿ ಅವನ ಸತ್ವ ಹೊರಬೀಳುವದು. ಭಂಗಾರಕ್ಕೆ ವರೆಗಲ್ಲು ಇದ್ದಂತೆ ಮೂರ್ಖ ನಿಂದಕರು ಮಹಾತ್ಮರನ್ನು ಪ್ರಕಾಶಕ್ಕೆ ತರಲಿಕ್ಕೆ ಒಂದ ಒರೆಗಲ್ಲು ಇದ್ದ ಹಾಗೆ. ಕತ್ತಲೆಯಿದ್ದಲ್ಲಿಯೇ ದೀಪದ ಮಹತ್ವ ಗೊತ್ತಾದಂತೆ ನಿಂದಕರ ನಿಂದೆಯನ್ನು ಮಹಾತ್ಮರ ತೇಜಿಸ್ಸು ಜಗತ್ತಿಗೆ ಬೆಳಕು ಮಾಡಿಸುವದು

ಮೇಲೆ ಹೇಳಿದಂತೆ ಮಹಾತ್ಮಾ ಮಡಿವಾಳ ಶಿವಯೋಗಿಗಳ ವಿದ್ಯಾಭ್ಯಾಸದ ಬೆಳಕಿನಿಂದ ಅಲ್ಲಿಯ ನಿಂದಕರ ಕಣ್ಣು ಕುಕ್ಕಲಾರಂಭಿಸಿದವು ನೋಡಿ ವಾಚಕರೇ, ಸುವರ್ಣ ಪರೀಕ್ಷೆಗೆ ವರೆಗಲ್ಲು ಬೇಕಾದಂತೆ ತನ್ನ ಕರ್ತವ್ಯದ ತಿರುಳು ತಿಳಿದು ಅವರ ಮಹಾತ್ಮೆ ತಿಳಿಯಬೇಕಾದರೆ ನಿಂದಕರೂಪಿ ಮಹಾತ್ಮರ ಗುಣಗಾನಿ ಶ್ವಾನಗಳು ಬೇಕೇ ಬೇಕು. ಇದಾವದನ್ನೂ ತಿಳಿಯದಲೇ ಸಾಧುಶಿರೋಮಣಿಗಳ ನೆಲೆಯನ್ನೂ ಅರಿಯದೆ ತಮ್ಮ ಮುಖದಿಂದ ಮಡಿವಾಳ ಸ್ವಾಮಿಗಳ ನಿಂದೆಯನ್ನಾರಂಭಿಸಿದರು. ಭವಲೀಲಾ ಮಾತ್ರರಾದ ಮಾನವರಿಗೆ ಭವಲೀಲಾ ಅನುಭವ ರೂಪವನ್ನು ಕಂಡು ಹಿಡಿಯುವದು ಅಸಾಧ್ಯ. ಈ ರೀತಿ ನಿಂದಕರ ನಿಂದೆಯನ್ನು ಸಹಿಸುತ್ತ ತಮ್ಮ ಬುದ್ಧಿ ಚಾತುರ್ಯವನ್ನು ತೋರಿಸುತ್ತಾ ಮಹಾಸ್ವಾಮಿಯವರು ಕಾಲಕಳೆಯುತ್ತಿರುವಾಗ ಕಾಶಿಯಲ್ಲಿ ಒಂದು ದಿವ್ಸ ಜಗತ್ತಿನ ಪಂಡಿತರ ಸಭೆಯು ಕೂಡಿತ್ತು. ಆ ಸಭೆಯಲ್ಲಿ ಅರ್ಥ ಮೀಮಾಂಶೆ ಚರ್ಚೆ ನಡೆಯಿತು. ನೋಡಿ ವಾಚಕರೇ ಒಬ್ಬ ಪಂಡಿತರಿದ್ದಾಗ ಅನೇಕ ಜನರು ಬೆರಗಾಗುವಾಗ ಪಂಡಿತರ ಸಭೆಯೆಂದ ಮೇಲೆ ಕೇಳುವದೇನಿದೆ. ಇಂತು ಗಾಂಭೀರ್ಯ ವೃತ್ತಿಯ ಸಭೆಯಲ್ಲಿ ದೇಶ ದೇಶಗಳಿಂದ ಆಗಮಿಸಿದ ಪಂಡಿತಾದ್ಯರ ಸಭೆಯಲ್ಲಿ ತಮ್ಮ ಪ್ರಿಯ ಶಿಷ್ಯ ನರಸಿಂಹಾಚಾರ್ಯರಿಂದ ಕೂಡಿಕೊಂಡು ದೇದಿಪ್ಯ ಮಾನವಾದ ಪ್ರಕಾಶದಿಂದ ಬೆಳಗುತ್ತಾ ತನ್ನ ದಿಗಂಬರ ಮೂರ್ತಿಯ ದಿವ್ಯ ಪ್ರಭಾವ ತೋರಿಸುವದಕ್ಕಾಗಿಯೋ ಅಥವಾ ತನ್ನ ವಿಜಯ ಪತಾಕೆಯನ್ನು ಪಂಡಿತ ಸಭೆಯಲ್ಲಿ ಮೆರೆಸುವದಕ್ಕಾಗಿಯೋ ಮಹತ್ಮಾಮಡಿವಾಳ ಶಿವಯೋಗಿಗಳು ತಮ್ಮ ಗಾಂಭೀರ್ಯತೆಯನ್ನು ಬೀರುತ್ತಾ ಸಭಾಪ್ರವೇಶ ಮಾಡಿದರು. ಅವರು ಬಂದಾಕ್ಷಣವೇ ಸಭೆಯಲ್ಲಿ ಒಂದು ತರಹದ ಪ್ರಕಾಶ ಬಿದ್ದಂತಾಗಿ ಸಭೆಗೆ ಕಳೆಯೇರಿತು.

ಈ ರೀತಿ ಸಭಾ ಪ್ರವೇಶ ಮಾಡಿದ ಮಹಾತ್ಮಾ ಮಡಿವಾಳಸ್ವಾಮಿಯವರು ಸಭೆಯಲ್ಲಿ ಒಂದು ಉಚಿತ ಆಸನದಲ್ಲಿ ಮಂಡಿತರಾದರು. ಸಭೆ

ಯಲ್ಲಿ ವೇದಾಂತ ವಿಷಯ ಚರ್ಚೆನಡೆಯಿತು. ಹಿಂದೆ ಪಾಂಡವರು ರಾಜ ಸೂಯಯಾಗ ಮಾಡುವಾಗ ಅಗ್ರ ಪೂಜೆಯ ವಿಷಯವಾಗಿ ರಾಜ-ರಾಜರಲ್ಲಿ ಪಕ್ಷವಾದಂತೆ ಈಗ ಪಂಡಿತರ ಸಭೆಯಲ್ಲಿ ಈರ್ಷೆಯಿಂದ ಚರ್ಚಿಸಲು ಪಕ್ಷ ಗಳಾದವು. ವಿಷಯಾನಂತರ ಚರ್ಚೆಗೆ ಪ್ರಾರಂಭವಾಗಲು ಮಹಾಸ್ವಾಮಿಯ ವರು ಎಲ್ಲಕ್ಕೂ ಹೆಚ್ಚಿನಗೌರತ್ವ ಪಡೆಯುತ್ತಾ ನಡೆದರು. ಆದರೆ ಅವರ ಕೀರ್ತಿಯು ಬೆಳಕಿನಲ್ಲಿ ಇರುವದು ಅಲ್ಲಿ ಕೆಲವರಿಗೆ ಸಹನವಾಗಲಿಲ್ಲ. ಗೀರ್ವಾಣ ಬಾಷಾ ಪಂಡಿತರಾದ ಸ್ವಾಮಿಯವರ ವಾಕ್‌ಚಾತುರ್ಯವನ್ನು ಕಂಡು ಮಹಾಸಭೆಯ ಪಂಡಿತರು ಬೆರಗಾದರು. ಜಗದ ವಿದ್ಯಾ ಭಾಂಢಾರವನ್ನೇ ತನ್ನಲ್ಲಿ ಇಟ್ಟುಕೊಂಡು ಜಗವನ್ನೇ ಅಲ್ಲೋಲಕಲ್ಲೋಲ ಮಾಡುವ ಜಗದೀಶನ ಮಹಿಮೆಯನ್ನರಿಯದ ಪಾಮರ ಪಂಡಿತರು ಜಗದೀಶ ಕುವರನಲ್ಲಿ ವಾದ ಮಾಡಿ ಜಯಿಸುವದು ಸಾಧ್ಯವಾದೀತೆ? ಆದರೂ ದೇವಾಧಿ ದೇವನ ದೇವತ್ವವನ್ನರಿಯದ ಮೂರ್ಖರು ದೇವ ಪತಿಯ ಕುವರನಲ್ಲಿ ಕುಂದು ಕಾಣಲು ಹಾತೊರೆದರು ಯಾವ ಕುಂದು ಕೊರತೆಗಳಿಲ್ಲದೆ ಸುಶೋಭಿತ ವಾದ ಆ ದಿಗಂಬರ ಮೂರ್ತಿಯ ದಿಗಂಬರತತ್ವವೇ ಅವರಿಗೆ ಒಂದು ಕುಂದಾಗಿ ತೋರಿತು. ಅದೇ ಆ ನಿಂದಕರ ನಿಂದಾಸ್ಪದಕ್ಕೆ ಕಾರಣವಾಯಿತು. ಇಂತು ದಿಗಂಬರರ ತತ್ವವು ಕುಂದೆಂದು ತಿಳಿದ ಪಂಡಿತರಲ್ಲಿ ಒಬ್ಬ ಪಂಡಿ ತನು ಎದ್ದು ಅಗ್ರಪೂಜೆಗೆ ಯೋಗ್ಯನಾದ ಶ್ರೀ ಹರಿಯು ಯೋಗ್ಯನಲ್ಲವೆಂದು ಅವನ ದಶವಾತರದ ಮಹತ್ವದ ಕಾರ್ಯಗಳನ್ನೆಲ್ಲ ವ್ಯತಾಸ ತಿಳಿದು ಅವನ ನಿಂದೆಯಿಂದ ತನ್ನ ಪ್ರಾಣವನ್ನೇ ಕೃಷ್ಣಬಾಣಕ್ಕೆ ಆಹುತಿಕೊಟ್ಟ ಮೂರ್ಖ ಶಿಶುಪಾಲನಂತೆ ಮಹಾಸ್ವಾಮಿಯವರ ಕುಂದು ಹೇಳಲಿಕ್ಕೆ ಎದ್ದನು. ಆ ಪಂಡಿತನು ಎದ್ದದ್ದನ್ನು ಕಂಡು ಸರ್ವಾಂತರ್ಯಾಮಿಯಾದ ಶಿವಸುತನು ಅವನ ಭಾವ ತಿಳಿದು ಶಾಂತಿಯಿಂದ ವಿಷಯ ಚರ್ಚೆ ನಡಿಸಿದನು. ಆಗ ಪಂಡಿತನು ಸ್ವಾಮಿಯವರನ್ನು ಕುರಿತು "ಏನು ಸ್ವಾಮಿಯವರೇ, ಇಷ್ಟೆಲ್ಲ ವೇದಾಂತ ವಿಷಯ ಚರ್ಚಿಸುವ ನೀವು ಜಿತೇಂದ್ರಿಯತ್ವವನ್ನು ಹೊಂದಪ ಹೀಗೇಕೆ ದಿಗಂಬರತ್ವದ ಸೋಗು ಹಾಕಿರುವಿರಿ" ಎಂದು ಪ್ರಶ್ನೆ ಮಾಡಿದನು. ಆಗ ಶಿವಸುತನು ಕೋಪಿಸಿದೆ ಅವನ ಮನಸ್ಸಿನ ಶಾಂತತೆಗಾಗಿ ತನ್ನ ಶಿಷ್ಯ ನರಸಿಂಹಾಚಾರ್ಯರಿಗೆ ಒಂದು ಅಗಲವಾದ ಪಾತ್ರೆ ತರಲು ಆಜ್ಞಾಪಿಸಿದರು.

ಮಹಾಸ್ವಾಮಿಯವರ ಅಪ್ಪಣೆಯಂತೆ ಪಾತ್ರೆಯನ್ನು ತಂದಿಡಲು ಅದರಲ್ಲಿ ಸರ್ವರೂ ನೋಡುತ್ತಿರಲು ತಮ್ಮ ಲಿಂಗಮುಖದಿಂದ ವೀರ್ಯಸ್ಖಲನ ಮಾಡಿದರು ಅದರಿಂದ ಹೊರಬಿದ್ದ ವೀರ್ಯವು ಪಾತ್ರೆ ತುಂಬಿ ಹೊರಬೀಳಲು ಅದು ಅಲ್ಲಿ ಹಾಸಿದ್ದ ರತ್ನಗಂಬಳಿಯ ಮೇಲೆ ಬಿದ್ದಿತು. ಅದರ ಪ್ರಖರ ತೇಜದಿಂದ ಅಲ್ಲಿ ಹಾಸಿದ್ದ ರತ್ನಗಂಬಳಿಯು ಸುಡಲಾರಂಭಿಸಿತು ಆಗ ಅಲ್ಲಿಯ ಪಂಡಿತರು ದಿಗ್ಭ್ರಾಂತರಾಗಿ ಮುಂದಿನ ವಿಚಾರಕ್ಕಾಗಿ ಚಿಂತಿಸಲು ಆಗ ಸ್ವಾಮಿಯವರು ರತ್ನಗಂಬಳಿಯ ಮೇಲೆ ಸಮುದ್ರನಾಥನಲ್ಲಿಯ ಒಡವಾಗ್ನಿರೂಪಿಯಂತೆ ಬಿದ್ದ ತಮ್ಮ ಆತ್ಮೀಯ ದಿವ್ಯ ತೇಜಸ್ಸನ್ನು ಪರಶಿವನು ಕುಡಿದ ಹಾಲಾಹಲ ವಿಷದಂತೆ ತಾವು ಯಾವ ಮಾರ್ಗದಿಂದ ಬಿಟ್ಟಿದ್ದರೋ ಅದೇ ಮಾರ್ಗದಿಂದ ತೆಗೆದುಕೊಳ್ಳಲುದ್ಯುಕ್ತರಾಗಲು ಆ ನಿಂದಕರ ನಿಂದೆಯಿಂದ ಅವಮಾನಿತ ತಪ್ತಹೃದಯದಿಂದ ಹೊರಬಿದ್ದ ದಳ್ಳುರಿಯ ಜ್ವಾಲೆಯು ಹೇಗೆ ಶಾಂತವಾದಿತೋ ಎಂದು ಚಿಂತಿಸುವ ಪಂಡಿತರ ಸಭೆಯನ್ನೂ ಶಾಂತಗೊಳಿಸಲಿಕ್ಕೆಂದೇ ಗುರುವು ಕೃಪೆ ಮಾಡಿದನೆಂದು ಗುರುವನ್ನು ಕೊಂಡಾಡಿದರು. ಮತ್ತು ಗುರುವನ್ನು ಕುರಿತುಪ್ರಾರ್ಥಿಸಲಾರಂಭಿದರು.ಆಗಶ್ರೀಗುರುವರರು ಅವರ ವಿನಂತಿಗೆ ಮಾನಕೊಟ್ಟು ಸಕಲರು ಬೆರಗಾಗುವಂತೆ ಯಾವ ಮಾರ್ಗದಿಂದ ಅದನ್ನು ಹೊರಗೆ ಬಿಟ್ಟಿದ್ದರೋ ಅದೇ ಮಾರ್ಗದಿಂದ ಶೋಷಿಸಿಕೊಂಡು ಅಲ್ಲಿ ಕೂಡಿದ ಪಂಡಿತ ಸಭೆಯ ವಿಜಯಕ್ಕೆ ಕಾರಣರಾದರು.

ನೋಡಿ ಮಹಾನುಭಾವರೇ, ಜಗನಿಯಮದಂತೆ ನಡೆಯುವ ಮಾನವನಲ್ಲಿ ಯಾರು ಶ್ರೇಷ್ಠರು? ಚತುರ್ದಶಭುವನವನ್ನೇ ಬೆಳಗುವ ಬಾಲಮೂರ್ತಿಯಾಗಿ ಬೆಳೆದು ಕಿತ್ತೂರ ಕಲ್ಮಠ ಪಟ್ಟಾಧಿಕಾರಕ್ಕೆ ಅಧಿಕಾರಿಯಾಗಿ ರಾಜವೈಭವದಿಂದ ಮೆರೆಯಬೇಕೆಂಬ ಇಚ್ಛೆಯಿಂದ ಪ್ರಭುವರರು ಶಿವನಲ್ಲಿ ಕಾಡಿಬೇಡಿ ಪಡೆದ ಫಲವು ಕಿತ್ತೂರ ಕಲ್ಮಠ ಪಟ್ಟಾಧಿಕಾರ ತ್ಯಜಿಸಿ ತನ್ನ ತಪ್ತಹೃದಯದಿಂದ ಕಿತ್ತೂರು ಸುಟ್ಟು ತನ್ನ ಆತ್ಮಬಲದ ತೇಜಸ್ಸಿನಿಂದ ಹೃದಯಭಾವ ಅಳಿದು ದಿಗಂಬರ ರೂಪಧರಿಸಿ ಮೂರ್ಖರ ನಿಂದೆಗೆ ಕಾರಣರಾಗಿ ಅದೇ ದಿಗಂಬರ ರೂಪದ ದಿವ್ಯ ಶಕ್ತಿಯನ್ನು ಜಗತ್ತಿಗೆ ತೋರಿಸಲು ತನ್ನ ಬ್ರಹ್ಮಚರ್ಯ ಬಲವನ್ನು ಪಂಡಿತ ಸಭೆಯಲ್ಲಿ ಪ್ರದರ್ಶಿಸಿದರು.

ಇಂತು ಪಂಡಿತ ಸಭೆಯಲ್ಲಿ ವಿಜಯಶಾಲಿಯಾದ ಮಹಾ ಗುರುವರರು ತಮ್ಮ ಆತ್ಮಬಲದ ಉನ್ನತಿಯ ಶಿಖರ ಮುಟ್ಟಿ ಆತ್ಮಿಯ ತೇಜಸ್ಸಿನಲ್ಲಿ ಅಂತರಾತ್ಮನ ಬೆಳಕು ಕಂಡು ಹೃದಯ ಪರಿವರ್ತಿಸಿ ತನ್ನ ಪಾಂಡಿತ್ಯದ ಕೀರ್ತಿಧ್ವಜವನ್ನು ಕಾಶಿಯ ಪಂಡಿತ ಸಭೆಯಲ್ಲಿ ಮೆರೆಸಿ ತನ್ನ ಜನ್ಮ ಭೂಮಿಯಾದ ಕರ್ನಾಟಕಾಂಬೆಯ ಭಕ್ತರ ಉದ್ಧಾರ ಮಾಡಲು ಜನ್ಮ ಭೂಮಿಯಲ್ಲಿ ಸಂಚರಿಸಲು ಕಾಶಿಯಿಂದ ಹೊರಡುವ ಮನಸ್ಸು ಮಾಡಿದರು. ಜಗತ್ತಿನಲ್ಲಿ ಮಾನವನು ಎಂಥವನಿದ್ದರೂ ಅವನು ಕಡೆಗೆ ಬ್ರಹ್ಮಚರ್ಯದ ತೇಜೋ ಬಲದ ಮುಂದೆ ಬಾಗಲೇಬೇಕಾಗುತ್ತದೆ. ಅದರಂತೆ ಸಿದ್ಧಮಾಡಿ ಕೊಡಲು ನಮ್ಮ ಮಹಾಸ್ವಾಮಿಯವರ ಪಂಡಿತ ಸಭೆಯ ವಿಜಯವೇ ಸಾಕ್ಷಿ ಇಂಥ ದಿಗ್ವಿಜಯ ಬ್ರಹ್ಮಚಾರಿಗಳಾದ ಮಹಾಸ್ವಾಮಿಯವರು ಕೂಡ ಜನ್ಮ ಭೂಮಿಯಲ್ಲಿ ಪ್ರೇಮ ತೋರಿಸಿದರು. ಅಂದ ಮೇಲೆ ಜಗತ್ತಿನಲ್ಲಿ ಮಾತೃಭೂಮಿಯ ಮಮತೆ ದೊಡ್ಡದು. ಕಾರಣ ಜಗದ ಪ್ರತಿಯೊಂದು ವ್ಯಕ್ತಿಯಲ್ಲಿ ದೇಶಾಭಿಮಾನ ಇರಬೇಕೆಂದು ಮಹಾತ್ಮರು ಬೋಧಿಸುತ್ತಾರೆ

**ಪುನರಾಗಮನ** (ತೀರ್ಥಾಟನೆ)

ಜಗದಿ ಪಂಡಿತ ಸಭೆಯ ಗೆಲಿಯುತ |
ನಿಗಮ ಶೀತನ ಕುವರ ತಿರುಗಿದ |
ಜಗದೊಳ್ ಮೆರೆದಿಹ ಮುದ್ದು ಕನ್ನಡ ಮಾತೆ ಕಾಣಲ್ಕೆ.||

ಶ್ರೀ ಗುರುವಿನಿಂದ ನಿರ್ಮಿತವಾದ ವಿಶ್ವದಲ್ಲಿ ಎಂಥ ಮಾನವನು ಜನ್ಮವೆತ್ತಿದರೂ ಕೂಡ ಅವನಲ್ಲಿ ಮಾತೃ ಭಾವನೆ ಇದ್ದೇ ಇರುವದು. ಅದರಂತೆ ಮಾನವನ ಜನ್ಮ ಧಾರಿಯಾಗಿ ಅವನು ಎಂಥ ವೈರಾಗ್ಯ ತಳೆದರೂ ಕೂಡ ಅವನು ಮಾತೃಭೂಮಿಯ ಸೇವೆಗಾಗಿ ಸದಾ ಹಂಬಲಿಸುವ ಅವನ ಧರ್ಮ ಅದರಂತೆ ಅಖಂಡ ಬ್ರಹ್ಮಚರ್ಯ ವ್ರತವನ್ನಾಚರಿಸಿದ ಗುರುವು ತನ್ನ ಜನ್ಮದಾತ ಕರ್ನಾಟಕಾಂಬೆಯನ್ನು ಕಾಣಬೇಕೆಂಬ ಇಚ್ಛೆಯಿಂದ ಕಾಶಿಯಿಂದ ಪ್ರಯಾಣ ಬೆಳಿಸಿದರು.

ರತ್ನವು ಯಾವದರಲ್ಲಿ ಸಮ್ಮಿಲತವಾದರೂ ತನ್ನ ಪ್ರಕಾಶವನ್ನು ಬೇರ್ಪಡಿಸಿ ಹೊಳೆಯುವಂತೆ ಮಹಾಸ್ವಾಮಿಯವರು ತಾವು ಹೋದಲ್ಲೆಲ್ಲ ತಮ್ಮ

ವಿದ್ಯೆಯ ಪ್ರಭಾವದಿಂದ ಬೆಳಗುತ್ತ ತೀರ್ಥಕ್ಷೇತ್ರಗಳನ್ನು ತಿರುಗುತ್ತಾ ಕರ್ನಾಟಕಕ್ಕೆ ತಲುಪಿದರು.

ಕಾಶಿಯಿಂದ ಹೊರಟ ಮಹಾಗುರುವು ಪರಶಿವನ ವಾಸಸ್ಥಾನವಾದ ಹಿಮಾಚ್ಛಾದಿತ ಕೈಲಾಸಗಿರಿಯನ್ನು ಕಾಣಲು ಹಂಬಲಿಸಿದರು. ಅವರು ಕಾಶಿಯಿಂದ ಹೊರಬಿದ್ದ ಮೇಲೆ ದಾರಿಯಲ್ಲಿ ಸರಯೂ ನದಿಯನ್ನು ದಾಟಿ ನಿಬಿಡವಾದ ಅರಣ್ಯಗಳನ್ನು ಗಗನಚುಂಬಿತ ವೃಕ್ಷಗಳಿಂದಲೂ, ಕ್ರೂರವನ್ಯ ಪಶುಗಳಿಂದಲೂ, ತುಂಬಿದ್ದನ್ನು ನೋಡುತ್ತ ಸೂರ್ಯ ಪ್ರಕಾಶವನ್ನು ಕೂಡ ಕಾಣದೆ ಬರೇ ದೂಮ್ರವಾದ ಹಿಮದಲ್ಲಿ ಕಾಮನ ಬಿಲ್ಲು ನೋಡುತ್ತ ತನ್ನ ಮನಸ್ಸಿನಲ್ಲಿ ಪರಶಿವನ ಲೀಲೆಯನ್ನು ವಿಶ್ವಸೃಷ್ಟಿಯ ನಿರ್ಮಾಣಕ್ಕೆ ಕೊಂಡಾಡುತ್ತ ಹಿಮಗಿರಿಯನ್ನೇರಲಾರಂಭಿಸಿದರು. ಮೊದಲು ಮಹಾ ಸ್ವಾಮಿಯವರು ಪರಶಿವನ ಜಟಾಭೂಷಿತ ಜಗದೊದ್ಧಾರಿ ಗಂಗಾಮಾತೆಯು ಹರಿದ್ವಾರದಲ್ಲಿ ಹರಿದ ಚಮತ್ಕಾರ ರೀತಿಯನ್ನು ಕಂಡರು. ಅಲ್ಲಿ ಅವರು ಶಿವ ಸತಿಯು ಭಗೀರಥನ ಪ್ರಯತ್ನಕ್ಕಾಗಿ ಒಲಿದ ಶಿವಸಂದು ತನ್ನ ವೇಗ ತಡೆಯಲ್ಪಟ್ಟು ಮಾನಸ ಸರೋವರದಿಂದ ಜನಿಸಿ ಅಲ್ಲಿಂದ ಹಿಮಗಿರಿಯ ಇಳುಕಲಿನಿಂದ ಅತಿ ತೀವ್ರವಾಹಿನಿಯಾಗಿ ಹರಿದ್ವಾರದವರೆಗೆ ಭೋರ್ಗರೆಯುತ್ತ ಬಂದು ಅಲ್ಲಿ ವಿಷ್ಣುಪಾದ ಬಂಧಿತಳಾಗಿ ತನ್ನ ಆವೇಶ ಮರೆಮಾಡಿ ಶಾಂತಿಯಿಂದ ಮುಂದೆ ವಿಶಾಲ ಹೃದಯಸ್ಥಳಾದದ್ದನ್ನು ಕಂಡರು. ಮತ್ತು ವಿಶ್ವವಾಹಿನಿಯನ್ನು ಪುಣ್ಯಭೂಮಿಯಲ್ಲಿ ತನ್ನ ಪ್ರಯತ್ನದಿಂದ ತಂದದ್ದಾಕ್ಕಾಗಿ ಜಗದ್ವಂದ್ಯ ವಿಶ್ವ ಪ್ರಯತ್ನಿ ಭಗೀರಥನನ್ನು ಕೊಂಡಾಡಿ ಮುಂದಕ್ಕೆ ಸಾಗಿದರು. ಅಲ್ಲಿಂದ ಮುಂದೆ ಕೇದಾರಗೌರಿ, ಬದರೀನಾಥ, ಮುಂತಾದ ಕ್ಷೇತ್ರಗಳಲ್ಲಿ ವಾಸವಾಗಿ ರ.ವ ಮಹಾತ್ಮರ ದರ್ಶನ ಹೊಂದುತ್ತ ಮುಂದೆ ಸಾಗಿದರು.

ಹೀಗೆ ಮುಂದೆ ಸಾಗಿದ ಮಹಾಸ್ವಾಮಿಯವರು ಮುಂದೆ ಕೈಲಾಸ ಗಿರಿಯನ್ನು ಕಂಡರು ಅಲ್ಲಿ ವಾಸವಾಗಿರುವ ಪರಾಶರ, ವಶಿಷ್ಠ, ಭಾರದ್ವಾಜ, ನರ ನಾರಾಯಣ, ನಾರದ, ಮೊದಲಾದ ಋಷಿಗಳ ದರ್ಶನ ತೆಗೆದುಕೊಂಡು ಪುನೀತ ಹೃದಯರಾಗಿ ಅಲ್ಲಿ ಕೆಲಕಾಲ ಕಳೆದು ಮುಂದೆ ಮಾನಸಸರೋವರಕ್ಕೆ ಹೋಗಿ ಅಲ್ಲಿಂದ ದಾರ್ಜಿಲಿಂಗದ ಮಾರ್ಗವಾಗಿ ಹಿಮಗಿರಿಯನ್ನು ಇಳಿಯಲಾರಂಬಿಸಿದರು ಅವರು ತಮ್ಮ ತೀವ್ರಗಾಮಿನಿಯಿಂದ ಭರತ

ಭೂಮಿಯ ಪುಣ್ಯವಾಹಿನಿಗಳೆನಿಸುವ ಪವಿತ್ರ ಗಂಗೆ-ಯಮುನೆಯರಿಂದ ಕೂಡಲ್ಪಟ್ಟ ಸರಯೂ ನದಿಯು ಸಂಗಮಸ್ಥಾನವಾದ ತ್ರಿವೇಣಿಗೆ ಬಂದು ಅಲ್ಲಿ ಸ್ನಾನ ತೀರಿಸಿಕೊಂಡು ಅಲ್ಲಿಂದ ದಕ್ಷಿಣಕ್ಕೆ ಹೊರಳಿದರು. ಅಲ್ಲಿಂದ ದಕ್ಷಿಣಕ್ಕೆ ಹೊರಳಿದ ಸ್ವಾಮಿಯವರು ಉಜ್ಜಯನಿ, ಮಥುರಾ, ವೃಂದಾವನ, ಗೋಕುಲ ವೊದಲಾದ ತೀರ್ಥ ಕ್ಷೇತ್ರಗಳನ್ನು ನೋಡುತ್ತಾ ಅಲ್ಲಲ್ಲಿ ತಮ್ಮ ವಿಧಿನಿಯಮಗಳನ್ನು ತೀರಿಸುತ್ತ ಅಲ್ಲಲ್ಲಿ ಮಹಾ ಜನರ ದರ್ಶನ ತೆಗೆದುಕೊಳ್ಳುತ್ತಾ ಅವರಿಗೆ ಉಪದೇಶಿಸಿ ಜನರನ್ನು ಮನದಾನಂದ ಪಡಿಸುತ್ತಾ ಲೋಕ ಪೂಜಿತರಾಗುತ್ತ ಭಕ್ತರನ್ನು ಆಶೀರ್ವದಿಸುತ್ತ ಹಿಂದುಸ್ತಾನದ ಅರ್ಧ ಭಾಗವಾದ ಪವಿತ್ರ ದಕ್ಷಿಣಕ್ಕೆ ಕಾಲಿಟ್ಟರು.

ಮಹಾಸ್ವಾಮಿಯವರು ದಕ್ಷಿಣಕ್ಕೆ ಕಾಲಿಟ್ಟಾಗ ವೊದಲಿಗೆ ಪರಮ ಪವಿತ್ರ ಭಾರತಾಂಬೆಯ ಮಕ್ಕಳಲ್ಲಿ ಧರ್ಮಾವನಿತೆಯಾದ, ಕಾಲಕಾಲಕ್ಕೆ ಅವತಾರ ಮಾಡಿದ ಮಹಾವಿಷ್ಣುವಿನ ಅವತಾರಗಳಲ್ಲೊಂದಾದ ರಾಮಾವತಾರದಲ್ಲಿ ತನ್ನ ಮಾತೆಯಾದ ಕೈಕೆಯಿಂದಾ ವನವಾಸಕ್ಕೆ ಕಳಿಸಲ್ಪಟ್ಟ ಶ್ರೀರಾಮನ ಮುಖ್ಯ ಸ್ಥಾನವಾದ ಪಂಚವಟಿಯಲ್ಲಿ ಮಹಾ ಗೋದಾವರಿಯ ಸಂಗಮ ಸ್ಥಾನವಾದ ತ್ರಿಂಬಕೇಶ್ವರನ ದರ್ಶನ ಮುಗಿಸಿಕೊಂಡು ಜಗದ್ವಂದ್ಯ ಜಗನ್ನಾಥಪುರಿಯಲ್ಲಿ ಪರಶಿವನನ್ನು ಪ್ರಾರ್ಥಿಸಿ ವೈಕುಂಠ ಸಮಾನವಾದ ವಿಷ್ಣುಕಂಚಿ, ಶಿವಕಂಚಿ, ವೊದಲಾದ ಪವಿತ್ರ ಕ್ಷೇತ್ರಗಳನ್ನು ಮುಗಿಸಿಕೊಂಡು ಅನಾದಿಕಾಲದಿಂದಲೂ ನಮ್ಮ ಕನ್ನಡಿಗರಿಗೆ ಅಭಿಮಾನಾಸ್ಪದವೂ ನಮ್ಮ ಕಲಿಯುಗದಲ್ಲಿ, ಅದೂ ಈಗ ಕರ್ನಾಟಕದಲ್ಲಿ ನಡೆಯಲಿರುವ ಶಕಪುರುಷನಾದ ಶಾಲಿವಾಹನನ ಮುಖ್ಯ ಸ್ಥಾನವಾದ ಮೈಸೂರಿಗೆ ಬಂದರು ಮಹಾಸ್ವಾಮಿಯರು ಮೈಸೂರಿಗೆ ತಲುಪಿದಾಗ ಅಲ್ಲಿ ಆಳುವ ಅರಸನು ಹಿಂದುಸ್ತಾನದ ಪ್ರಾಮುಖ್ಯ ಪಂಡಿತರ ಸಭೆಯನ್ನು ಕರೆದಿದ್ದನು. ಆ ಸಭೆಗೆ ಮಹಾಸ್ವಾಮಿಯವರ ಗುರುಗಳಾದ ಹಾವೇರಿಯಂಗಿ ಚನ್ನಬಸವಶಾಸ್ತ್ರಿಗಳು ಬಂದಿದ್ದು ತಿಳಿದು ಅವರನ್ನು ಸಂದರ್ಶಿಸಿದರು. ಮಹಾಸ್ವಾಮಿಯವರ ದರ್ಶನವಾದ ಕೂಡಲೇ ಅಲ್ಲಿ ನಡೆಯಲಿರುವ ಸಂಗತಿಯನ್ನು ಮಡಿವಾಳಸ್ವಾಮಿಯವರಿಗೆ ತಿಳಿಸಿದರು. ಅಗ ಸ್ವಾಮಿಯವರು ತಾವೂ ಸಭೆಯಲ್ಲಿ ಭಾಗ ತೆಗೆದುಕೊಳ್ಳುವ ದಾರಿಕಾಯುತ್ತ ಊರ ಹೊರಗಿರುವ ಮಾರುತಿ ದೇವಾ

ಲಯದಲ್ಲಿ ಗುರುಗಳೊಡನೆ ದಾರಿಕಾಯುತ್ತ ಕುಳಿತರು. ಹೀಗಿರುವಾಗ ನಾಲ್ಕು ದಿವಸಗಳ ನಂತರ ಆ ಊರ ಒಬ್ಬ ಪ್ರಮುಖ ವ್ಯಕ್ತಿಯು ಮಾರುತಿಯ ದರ್ಶನಕ್ಕಾಗಿ ಬಂದನು. ಆಗ ಮಹಾಸ್ವಾಮಿಯವರು ಅವನನ್ನು ಕೂಡ್ರಿಸಿಕೊಂಡು ಅವನಿಗೆ ಮಾರುತೀಶ್ವರರ ಚರಿತ್ರವನ್ನು ಅವನ ಮನಸ್ಸು ಒಲಿಯುವಂತೆ ಹೇಳಿ ಅವನು ತಮ್ಮ ಶಿಷ್ಯನಾಗುವಂತೆ ಪ್ರೇರಿಸಿದರು.

ಆಗ ಅವನು ಮಹಾಸ್ವಾಮಿಯವರ ಕೀರ್ತಿಯನ್ನು ಕೊಂಡಾಡುತ್ತ ಅರಸನಿಗೆ ಮಹಾಸ್ವಾಮಿಯವರು ಬಂದ ಸಂಗತಿಯನ್ನು ತಿಳಿಸಿದನು ಆಗ ಅರಸನು ಗುರುಶಿಷ್ಯರಿಗಿಬ್ಬರಿಗೂ ಸಭೆಗೆ ಬರಲು ಆಮಂತ್ರಣ ಕಳಿಸಿದನು.

ಅಲ್ಲಿ ನೆರೆದ ಸಭೆಗೆ ಒಟ್ಟು ಐದುನೂರಾಯಪ್ಪತ್ತು ಜನ ಪಂಡಿತರು ಕೂಡಿದ್ದರು. ಅವರಲ್ಲಿ ಮುಖ್ಯರೆಂದರೆ ಲಂಬಕರ್ಣ, ಗಜಕರ್ಣ, ಪಾತಾಳ ಸನ್ಯಾಸಿ ಅಲ್ಲಿ ಶಾಸ್ತ್ರ ಮಿಮಾಂಸೆಗಳ ಚರ್ಚೆಮಾಡಿ ಆ ಮೂವರು ಪಂಡಿತರನ್ನೂ ಗೆದ್ದಿದ್ದರು. ಮಹಾಸ್ವಾಮಿಯವರು ಹೋದನಂತರ ಪ್ರತಿ ಇವರೊಡನೆ ಚರ್ಚಿಸಲು ಅವರು ಸಿದ್ಧರಾದರು ಮೊದಲು ಮಹಾಸ್ವಾಮಿಯವರ ಗುರುಗಳು ಲಂಬಕರ್ಣ, ಗಜಕರ್ಣ, ಇವರನ್ನು ಜಯಿಸಿದರು ಆ ನಂತರ ಪಾತಾಳ ಸನ್ಯಾಶಿಯೊಡನೆ ನಿರಾಹಾರಚರ್ಚೆಯು ಪಣತೊಟ್ಟು ಪಾತಾಳಸನ್ಯಾಸಿಯೊಡನೆ ಚರ್ಚೆ ನಡೆಸಲಾರಂಭಿಸಿದರು. ಹನ್ನೊಂದು ದಿವಸದ ನಂತರ ಆ ಪಾತಾಳ ಸನ್ಯಾಶಿಯು ಕರ್ಪೂರದಲ್ಲಿ ಶಾರದೆಯನ್ನು ಪ್ರತಿಷ್ಠಾಪಿಸಿ ಅವಳ ಬಾಯಿಂದಲೇ ಶಾಸ್ತ್ರ ಮಿಮಾಂಶೆಯ ಚರ್ಚೆಗೆ ಉತ್ತರ ಕೊಡಲಾರಂಭಿಸಿದರು. ಆಗ ಚನ್ನಬಸವಾಚಾರ್ಯರು ಮಡಿವಾಳ ಸ್ವಾಮಿಯವರನ್ನು ಕಂಡು ತಿರುಗಿ ನೋಡಲು ಆಗ ಸ್ವಾಮಿಯವರು ಆ ಗುರುವಿನ ಸ್ಥಾನಕ್ಕೆ ತಾವು ನಿಂತು ಶಾರದೆಗೆ ಪ್ರತಿಯಾಗಿ ಟೆಂಗಿನ ಮೇಲೆ ಷಣ್ಮುಖದೇವರ ಸ್ಥಾಪನೆಗೈದು ತನ್ನ ಪ್ರಶ್ನಿಸುವ ಶಾರದೆಗೆ ಉತ್ತರಿಸಲಾರಂಭಿದರು. ಈ ರೀತಿ ಹನ್ನೊಂದು ದಿವಸಗಳವರೆಗೆ ಶಾಸ್ತ್ರ ವಾದ ನಡೆದು ಶಾರದೆಯು, ಮಗು ಮಡಿವಾಳಾ, ನಿನ್ನ ವಿದ್ವತ್ತಿಗೆ ಮೆಚ್ಚಿದೆ, ನೀನು ಜಗದ್ವಂದ್ಯನಾಗಿ ಬಾಳು. ಎಂದು ಆಶೀರ್ವದಿಸಿ ಅಲ್ಲಿಯ ಪಂಡಿತರ ಸಭೆಯು ಬೆರಗಾಗುವಂತೆ ಶಾರದೆಯು ಮಾಯವಾದಳು. ಅಲ್ಲಿಯ ಪಂಡಿತರ ಸಭೆಯಲ್ಲಿ ಕೂಡಿದ ಜನರು ಬೆಪ್ಪಾಗಿ ಮಹಾಸ್ವಾಮಿಗಳನ್ನು ಸ್ತುತಿಸಲಾರಂಭಿಸಿದರು. ಆಗ ಮಹಾಸ್ವಾಮಿಯವರು ಮಹಾ

ರಾಜನ ಆದರಕ್ಕೆ ಪಾತ್ರರಾಗಿ ಕೆಲದಿವಸ ರಾಜನ ಅರಮನೆಯಲ್ಲಿ ಆಥಿತ್ಯ ಸ್ವೀಕಾರಮಾಡುತ್ತ ರಾಜಮರ್ಯಾದಿತರಾಗಿ ಕಾಲಕಳೆದರು. ಹೀಗಿರುತ್ತಿರುವಾಗ ಮಹಾಸ್ವಾಮಿಯವರು ಆ ಅರಸನಿಗೆ ಹಿತೋಪದೇಶಗಳನ್ನು ಮಾಡುತ್ತ ಕೆಲಕಾಲ ಮೈಸೂರಿನಲ್ಲಿ ಕಳೆದರು ಅನಂತರ ಅಲ್ಲಿಯ ಆಸ್ಥಾನಪಂಡಿತರಾದ ಪರಕಾಲಮಠದ ಸ್ವಾಮಿಗಳವರ ಕೂಡ ಅರ್ಥ ಶಾಸ್ತ್ರ ಮಿಮಾಂಸೆ ಸಂಸ್ಕೃತಗಳ ಚರ್ಚೆಮಾಡಿ ಅವರ ಆದರಾತಿಥ್ಯಗಳಿಗೆ ಪಾತ್ರರಾದರು. ಅಲ್ಲಿ ಮಹಾಸ್ವಾಮಿಗಳವರು ಕೆಲಕಾಲಕಳೆದರು. ಅಲ್ಲಿಂದ ಮಹಾಸ್ವಾಮಿಗಳು ತಮ್ಮ ಗುರುಗಳ ಆಜ್ಞೆಯನ್ನು ಪಡೆದು ರಾಮೇಶ್ವರಕ್ಕೆಂದು ದಕ್ಷಿಣಕ್ಕೆ ಸರಿದರು. ಅವರು ದಕ್ಷಿಣಕ್ಕೆ ಹೊರಟಾಗ ದೇವರುಷಿಗಳ ತಪಶ್ಚರ್ಯಕ್ಕೆ ವಲಿಯದ ಪರಶಿವನು ತನ್ನ ಇಷ್ಟಲಿಂಗವನ್ನೇ ರಾವಣನ ಭಕ್ತಿಗೊಲಿದು ಕೊಡಲು ಮುರ್ಖಶಿರೋಮಣಿಯಾದ ರಾವಣನು ತನ್ನ ಕಾಲಗತಿಗನುಸಾರವಾಗಿ ಪರಶಿವನಲ್ಲಿ ತೋರಿದ ಅವಿಶ್ವಾಸಕ್ಕೆ ಪಶ್ಚಾತ್ತಾಪವಾಗುವಂತೆ ತನಗೆ ದೊರೆತ ಇಷ್ಟಲಿಂಗವನ್ನು ಕೆಳಗೆ ಇಡಲು ಅದು ಸಪ್ತಪಾತಾಳಗಳನ್ನೇ ವ್ಯಾಪಿಸಿತು. ಅದಕ್ಕೆ ತ್ರಿಮೂರ್ತಿಗಳ ಶಕ್ತಿಯನ್ನು ಒಟ್ಟುಗೂಡಿಸಿದರೂ ಕೀಳದಂಥ ಲಿಂಗವನ್ನು ತನ್ನ ಬಲಾಢ್ಯ ಶಕ್ತಿಯನ್ನು ಉಪಯೋಗಿಸಿ ಅದನ್ನು ಕೀಳಲೆತ್ನಿಸಿದನು ಆಗ ಭೂಮಂಡಲವು ಬೆದರಿ ಪರಶಿವನನ್ನು ಮರೆಹೋಗಲು ಶಿವನು ಪ್ರತ್ಯಕ್ಷನಾಗಿ ರಾವಣನಿಗೆ ವರವನ್ನಿತ್ತಸ್ಥಾನವಾದ ಭೂಕೈಲಾಸ ಅರ್ಥಾತ ಗೋಕರ್ಣಕ್ಕೆ ಬಂದು ಅಲ್ಲಿ ಪರಶಿವನ ಆತ್ಮಲಿಂಗದ ದರ್ಶನ ತೆಗೆದುಕೊಂಡು ಅಲ್ಲಿಂದ ಚನ್ನಪಟ್ಟಣದ ಹಾದಿ ಹಿಡಿದರು.

ನೋಡಿ ವಾಚಕ ಮಹಾಶಯರೇ ಮನುಷ್ಯನು ಯಾವದಾದರೂ ಒಂದು ಸದ್ಗುಣವಂತನಾದರೆ ಅವನು ಜಗತ್ತಿನಲ್ಲಿ ಕೀರ್ತಿಶ್ಯಾಲಿಯಾಗುವದು ಸತ್ಯ. ಅದರಲ್ಲಿಯೂ ಸದ್ಗುಣಗಳಿಂದ ಕೂಡಿದ ಮಹಾತ್ಮನಲ್ಲಿ ಬ್ರಹ್ಮಚರ್ಯದ ತೇಜೋಬಲವು ಕೂಡಿತೆಂದರೆ ಅದು ಭಂಗಾರಕ್ಕೆ ಕುಂದಣವನ್ನು ಕೊಟ್ಟಂತಾಗುತ್ತದೆ.

ಶ್ರೀ ಗುರುಮಡಿವಾಳೇಶ್ವರರು ತಮ್ಮ ಮುಕ್ತಿಮಾರ್ಗದ ಪ್ರಥಮ ಮೆಟ್ಟಲಾದ ದಿಗಂಬರ ರೂಪವನ್ನು ಧರಿಸಿ ಅದಕ್ಕೆ ದೇಶಾನುಭವ ದೇಹಾನು

ಭವವನ್ನು ನೀಡಲು ದೇಶಪರ್ಯಟನವನ್ನು ಕೈಕೊಂಡರು. ಹಾದಿಯಲ್ಲಿ ಎಂಥ ಸಂಕಟಗಳು ಬಂದರುಕೂಡಾ ಅವುಗಳನ್ನು ಪ್ರಯಾಸದಿಂದ ಸಹಿಸುತ್ತ ತಮ್ಮ ಸತ್ವವನ್ನು ಕಾಯ್ದುಕೊಳ್ಳುತ್ತಾ ಜಗದ ಪ್ರೀತಿಯನ್ನು ಸಂಪಾದಿಸುತ್ತ ಅಖಂಡ ಹಿಂದುಸ್ತಾನವನ್ನು ಸಂಚರಿಸಿದರು.

ಮೇಲೆ ಹೇಳಿದಂತೆ ಚನ್ನಪಟ್ಟಣದ ಮಾರ್ಗವಾಗಿ ಹೊರಟ ಮಹಾಸ್ವಾಮಿಯವರು ತಾವು ಮುಟ್ಟಬೇಕೆಂದಿದ್ದ ಚನ್ನಪಟ್ಟಣವನ್ನು ಮುಟ್ಟಿದರು. ಆ ಚನ್ನಪಟ್ಟಣದಲ್ಲಿ ಒಬ್ಬ ಕೋಟ್ಯಾಧೀಶನಿದ್ದನು. ಅವನು ಮಹಾಸ್ವಾಮಿಯವರನ್ನು ಸತ್ಕರಿಸಿ ಅವರಿಗೆ ಇಳಿದುಕೊಳ್ಳಲು ಒಂದು ಮನೆಯನ್ನು ಕೊಟ್ಟನು.

ಇಂತು ಇಳಿದಿಹ ಶಾಂತಿ ಗುರುವರ
ಭ್ರಾಂತಿಯಿಂದಲಿ ರೂಪವ ತೋರಿದ
ಭ್ರಾಂತಿರೂಪದ ಬ್ರಹ್ಮರಾಕ್ಷಸನುದ್ಧರಿಸಿದ ವೀರಗುರುವರನು ॥

ಮಹಾಸ್ವಾಮಿಯವರನ್ನು ಆದರಿಸಿ ಅವರಿಗೆ ಇಳಿದುಕೊಳ್ಳಲಿಕ್ಕೆ ಆ ಶೆಟ್ಟಿಯು ಕೊಟ್ಟ ಮನೆಯಲ್ಲಿ ಬ್ರಹ್ಮರಾಕ್ಷಸವು ವಾಸವಾಗಿ ಎಷ್ಟೋ ದಿನಗಳಿಂದ ಅಲ್ಲಿ ವಾಸಿಸಿದ ಜನರಿಗೆ ತ್ರಾಸು ಕೊಡುತ್ತಿತ್ತು. ಜನರು ಅದರಲ್ಲಿ ವಾಸಿಸದಂತೆ ಮಾಡಿತ್ತು. ಇಂತು ರಾಕ್ಷಸನಿಂದಾ ಉಪದ್ರಿತವಾದ ಆ ಮನೆಗೆ ರಾಕ್ಷಸಗ್ರಹವೆಂಬ ಹೆಸರಿತ್ತು. ಅಲ್ಲಿ ಜನರು ಹಾಯಲು ಹೆದರುತ್ತಿದ್ದರು. ಇಂಥ ಭಯಾನಕ ಮಂದಿರದಲ್ಲಿ ನಮ್ಮ ಗುರುವರನ ಸತ್ವ ಪರೀಕ್ಷೆಗಾಗಿಯೋ ಆಥವಾ ಮಹಾತ್ಮರೆಂಬ ಭಾವನೆಯಿಂದಾ ಬ್ರಹ್ಮ ರಾಕ್ಷಸನನ್ನು ಅವರಿಂದ ಶಿಕ್ಷಿಸುವದಕ್ಕಾಗಿಯೋ ಅದು ಅಂಥ ಸ್ಥಾನವೆಂದು ಗೊತ್ತಿದ್ದರೂ ಅವರಿಗೆ ಅದನ್ನು ಅಲ್ಲಿಯ ಜನರು ಹೇಳಲಿಲ್ಲಾ ಈ ರೀತಿ ತಿಳಿದೋ, ಅಥವಾ ತಿಳಿಯದಲೋ ಸರ್ವಾಂತರ್ಯಾಮಿಯಾದ ಪರಶಿವನು ಶಾಂತ ಚಿತ್ತದಿಂದಾ ಆ ಮಂದಿರದಲ್ಲಿ ಅಂದಿನ ರಾತ್ರಿ ಕಳೆಯಲು ಮನಸ್ಸು ಮಾಡಿದರು ಮಹಾಸ್ವಾಮಿಯವರ ಸಲುವಾಗಿ ಆ ಹೊತ್ತು ಆ ಸಾವುಕಾರನು ಆ ಮನೆಯಲ್ಲಿ ಅನ್ನ ಸಂತರ್ಪಣೆ ಮಾಡಿಸಿ ಪಂಡಿತರ ಸಭೆ ಕರೆದು ಶಾಸ್ತ್ರ ಚರ್ಚೆಯನ್ನು

ನಡೆಯಿಸಿದನು. ಆ ಶಾಸ್ತ್ರ ಚರ್ಚೆಯು ಮುಗಿದ ನಂತರ ಕೆಲಕಾಲ ಕುಳಿತು ಅಲ್ಲಿ ಕೂಡಿದ್ದ ಪಂಡಿತರು ಒಬ್ಬೊಬ್ಬರಾಗಿ ತಮ್ಮ ತಮ್ಮ ಮನೆಗಳಿಗೆ ಹೋದರು. ಅವರೆಲ್ಲರೂ ಹೋದ ನಂತರ ಮಹಾಸ್ವಾಮಿಯವರು ತಮ್ಮ ಗಂಟು ಬಿಚ್ಚಿ ಹಾಸಿ ನಿದ್ರಿಸಲು ಸಿದ್ಧರಾದರು.

ಆ ಪಂಡಿತರು ತಾವು ಮಾಡಿದ ಹಂಚಿಕೆಯು ಮಹಾಸ್ವಾಮಿಗಳವರಿಗೆ ತಿಳಿದಿಲ್ಲವೆಂದು ಎಲ್ಲರ ಕಲ್ಪನೆಯಿತ್ತು. ಆದರೆ ತ್ರಿಕಾಲಜ್ಞಾನಿಗಳಿಗೆ ಎಲ್ಲವೂ ಜ್ಞಾಪಕವಿತ್ತು. ಆದರೆ ಪ್ರಸಂಗಕ್ಕೆ ಸರಿಯಾದ ಉಪಾಯ ಬಲ್ಲ ಮಹಾತ್ಮರು ಯಾವ ಭಯವಿಲ್ಲದೆ ಆ ಮನೆಯಲ್ಲಿ ಮಲಗಿಕೊಂಡರು. ನಾಲ್ಕು ತಾಸು ರಾತ್ರಿಯವರೆಗೆ ಅಲ್ಲಿಯ ಜನರು ಹೋದ ನಂತರ ಮಡಿವಾಳ ಸ್ವಾಮಿಯವರು ನಿದ್ರೆಹೋಗಲನುವಾದರು. ಇಂತು ಯಾವ ಭಯವಿಲ್ಲದೆ ನಿದ್ರೆಹೋದ ಮಹಾತ್ಮರು ಮಲಗಿದ ಮನೆಯಲ್ಲಿ ಎಲ್ಲಿ ನೋಡಿದಲ್ಲಿ ಪ್ರಶಾಂತಮಯವಾದ ವಾತಾವರಣವು ಹಬ್ಬಿತ್ತು. ಆ ಮನೆಯ ಮೂಲೆಯಲ್ಲಿ ಒಂದು ದೀಪವು ಮಿಣುಕುತ್ತಿತ್ತು. ದೀಪದ ಮಂದ ಪ್ರಕಾಶವನ್ನು ಬಿಟ್ಟು ಆ ಮನೆಯ ಎಲ್ಲ ಕಡೆಯಲ್ಲಿಯೂ ಅಂಧಃಕಾರವು ತುಂಬಿ ತುಳುಕುತ್ತಿತ್ತು. ಭವದ ಅಂದಃಕಾರವನ್ನು ಹರಿದೊಗೆದ ಭವಪಾಶತೀತ ದಿಗಂಬರ ಮೂರ್ತಿಯನ್ನು ನುಂಗಲು ತನ್ನ ಭಯಂಕರ ಸ್ವರೂಪವನ್ನು ತೋರಿಸಿತು. ಇಂಥ ಭಯಾನಕವಾದ ಅಂಧಃಕಾರದ ಮಧ್ಯರಾತ್ರಿಯಲ್ಲಿ ಆ ಮನೆಯಲ್ಲಿ ವಾಸವಾಗಿದ್ದ ಬ್ರಹ್ಮರಾಕ್ಷಸವು ತನ್ನ ಭೀಕರ ರೂಪವನ್ನು ತಳೆದು ಮಾನವನನ್ನು ನುಂಗಲು ಬರುವ ಮಹಾಮೃತ್ಯು ದೇವತೆಯಂತೆ ಭೀಕರ ಸ್ವರೂಪದಿಂದಾ ಗುರುವಿಗೆ ದರ್ಶನವನ್ನಿತ್ತು ಗಹಿಗಹಿಸಿ ನಗಲಾರಂಭಿಸಿತು. ಇಂತು ಅಕಸ್ಮಾತ್ತಾಗಿ ಗಹಿಗಹಿಸಿ ನಕ್ಕ ಧ್ವನಿಯನ್ನು ಕೇಳಿ ಮಹಾಸ್ವಾಮಿಯವರು ಕಣ್ದೆರೆದು ನೋಡಿದರು ಮಂದವಾದ ಹಣತೆಯ ಬೆಳಕಿನಲ್ಲಿ ದಿವ್ಯರೂಪವನ್ನು ತೋರಿಸಿ ತನ್ನ ಕ್ರೂರತ್ವದ ತಾಂಡವನೃತ್ಯಗೈಯುವ ರಾಕ್ಷಸನ ಮೂರ್ತಿಯು ಗುರುವಿನ ದರ್ಶನಕ್ಕೆ ಬಿತ್ತು. ಆಗ ಮಹಾಸ್ವಾಮಿಗಳು ಪೂರ್ಣವಾಗಿ ಎಚ್ಚತ್ತು ಆ ರಾಕ್ಷಸನ ಕ್ರೂರ ರೂಪವನ್ನು ಕಣ್ದೆರೆದು ನೋಡಿದರು. ಹೀಗೆ ಯಾವ ಭಯವಿಲ್ಲದೆ ಎದ್ದು ಕುಳಿತ ಮಹಾಸ್ವಾಮಿಯವರನ್ನು ಕಂಡು ರಾಕ್ಷಸವು ಆಶ್ಚರ್ಯಚಕಿತವಾಯಿತು.

ಆಗ ಅದು ತನ್ನೆದುರಿನಲ್ಲಿ ಕುಳಿತಿರುವ ಭವ್ಯ ಮೂರ್ತಿಯನ್ನು ಕಂಡು ಬೆರಗಾಯಿತು. ಮತ್ತು ಕೆಲಕಾಲ ಮೌನದಿಂದಾ ನಿಂತಿತು. ಆಗ ಅದನ್ನು ನೋಡಿ ಮಹಾಸ್ವಾಮಿಯವರು,—

ಕಂಡೆನೆಲೆ ಮಾಯ ನಿನ್ನ ರೂಪವ । ಭಂಡತನವ ಬಿಡು।
ದಂಡಿಸದೆ ಪೋಪುದಿಲ್ಲ । ಬಂಡತನವ ಮಾಡದಲೆ ನೀ ॥

ಇಂತು ಪದವನ್ನು ಅನ್ನಲಾರಂಭಿಸಿದರು. ಈ ರೀತಿ ತನ್ನ ಚರಿತಾರ್ಥದ ಮರ್ಮತೊರಲು ಶಕ್ಯವಿದ್ದ ಮಹಾತ್ಮನು ಯಾರೆಂಬುದನ್ನು ತಿಳಿಯಲು ಆ ಬ್ರಹ್ಮ ರಾಕ್ಷಸವು ಹವಣಿಸಿತು. ಮತ್ತು ಇನ್ನು ತನ್ನ ಆಟವು ಸಾಗುವದಿಲ್ಲವೆಂದರಿತು ಮಹಾಸ್ವಾಮಿಯವರೊಡನೆ ಚರ್ಚೆಗಾರಂಭಿಸಿತು.

ಎಲೋ ನೀನು ಯಾರು ? ನನ್ನ ವಾಸಸ್ಥಾನವಾದ ಈ ಮನೆಯಲ್ಲಿ ಪ್ರವೇಶ ಮಾಡಲು ಅಧಿಕಾರವೇನು ನೀನು ನನ್ನ ಆಹುತಿಯಾಗಬೇಕೆಂದಿದ್ದಂತೆ ಕಾಣುತ್ತದೆ ಎಂದು ನುಡಿದು ಗಹಿಗಹಿಸಿ ನಕ್ಕಿತು. ಅದಕ್ಕೆ ಮಡಿವಾಳ ಸ್ವಾಮಿಯವರು ಎಲೋ ಪಿಶಾಚಿಯೇ ಜಗತ್ತೇ ಆತ್ಮವಾಸಸ್ಥಾನವಾಗಿರುವಾಗ ನಿನ್ನಂಥ ಕ್ಷುದ್ರ ಜೀವಿಗೆ ಬೇರೆ ವಾಸಸ್ಥಾನವು ಎಲ್ಲಿಂದ ಬರಬೇಕು, ನಿನಗೆ ಧೈರ್ಯವಿದ್ದಲ್ಲಿ ನನ್ನ ಸಮೀಪಕ್ಕೆ ಬಾ ಆಗ್ಯೆ ತಿಳಿಯುವದು ನಿನ್ನ ಬೆಳಕು. ಈ ರೀತಿ ಮಹಾಸ್ವಾಮಿಯವರು ನುಡಿದ ನಂತರ ಆ ಬ್ರಹ್ಮ ರಾಕ್ಷಸವು ತನ್ನಷ್ಟಕ್ಕೆ ತಾನೇ ವಿಚಾರ ಮಾಡಲಾರಂಭಿಸಿತು. ನನ್ನ ದರ್ಶನವಾದ ಕೂಡಲೇ ಸಕಲ ಪ್ರಾಣಿಗಳು ಹೆದರಿ ನಡುಗುವಾಗ ಇವನಾವನೋ ಮಹಾತ್ಮನು ನನ್ನೆದುರಿನಲ್ಲಿ ಧೈರ್ಯವಾಗಿ ಮಾತನಾಡುತ್ತಿರುವನಲ್ಲಾ ಎಂದು ಆಲೋಚಿಸುತ್ತಿರಲು ಮಹಾಸ್ವಾಮಿಯವರು ಎಲೋ ಮಾಯಾ ರಾಕ್ಷಸಾ ನಿನ್ನ ಮರ್ಮವನ್ನು ನಾನು ಬಲ್ಲೆ ಇನ್ನು ನೀನು ಇಲ್ಲಿ ಇರಲು ಯೋಗ್ಯನಲ್ಲ ಬೇರೊಂದು ಸ್ಥಾನವನ್ನು ಹುಡುಕು ಎಂದು ಹೇಳಲು ಆ ರಾಕ್ಷಸನು ಇವನಾವನೋ ಮಹಾತ್ಮನಿರಬೇಕು, ಇವನ ಮುಂದೆ ನನ್ನ ಆಟವು ನಡೆಯಲಾರದು ಇವನಿಗೆ ಮೊರೆ ಹೊಕ್ಕು ನನ್ನ ಜನ್ಮ ಉದ್ಧಾರ ಮಾಡಿಕೊಳ್ಳಬೇಕೆಂದು ಮನಸ್ಸಿನಲ್ಲಿ ಯೋಚಿಸಿ ಮಡಿವಾಳಸ್ವಾಮಿಯವರಿಗೆ

ಸಾಷ್ಟಾಂಗ ನಮಸ್ಕಾರ ಮಾಡಿ ಮಹಾನುಭಾವಾ, ನನಗೆ ಜೀವನ್ಮುಕ್ತಿ ಯನ್ನು ಕರುಣಿಸು ಈ ಪರಿ ದೈನ್ಯವೃತ್ತಿಯಿಂದಾ ಬೇಡುವ ರಾಕ್ಷಸನನ್ನು ನೋಡಿ ಮಹಾಸ್ವಾಮಿಯವರಿಗೆ ಕರುಣ ಬಂದಿತು.

ಆಗ ಅವರು ಅದಕ್ಕೆ ಎಲೋ ರಾಕ್ಷಸಾ ಅಂಜಬೇಡ. ಇನ್ನು ತುಸು ದಿವಸಗಳಲ್ಲಿ ನಿನ್ನ ಸಂಚಿತ ಕರ್ಮವು ಪರಿಹಾರವಾಗಿ ನಿನಗೆ ಈ ಪಿಶಾಚಿಯು ಜನ್ಮದಿಂದ ಮುಕ್ತಿಯಾಗುವದು. ನೀನು ಎಲ್ಲಿಯೋ ವಾಸವಾಗಿದ್ದರೂ ಜನರಿಗೆ ತ್ರಾಸು ಕೊಡಬೇಡ, ಎಂದು ಹೇಳಿ ಅದಕ್ಕೆ ಆಶೀರ್ವದಿಸಿದರು. ಅದಕ್ಕೆ ಆ ರಾಕ್ಷಸನು ಆಗಲಿ ಮಹಾತ್ಮಾ ನಿನ್ನಿಚ್ಛೆಯಂತೆ ವರ್ತಿಸುವೆ ಎಂದು ಹೇಳಿ ಅವರಿಗೆ ಸಾಷ್ಟಾಂಗ ನಮಸ್ಕರಿಸಿ ಅಲ್ಲಿಂದ ಮಾಯವಾಯಿತು. ಅದು ಹೋದ ಮೇಲೆ ಮಹಾಸ್ವಾಮಿಯವರ ಮನಸ್ಸಿನಲ್ಲಿ ವಿಚಾರ ತರಂಗಗಳೆದ್ದು ಹೃದಯವನ್ನು ಕುದಿಸಲಾರಂಭಿಸಿದವು. ಅವರ ಮನಸ್ಸಿನಲ್ಲಿ ಆ ಸಾವು ಕಾರನ ವಿಷಯವಾಗಿ ಇಲ್ಲದ ಕಲ್ಪನೆಗಳು ಬರಲಾರಂಭಿಸಿದವು. ಈ ರೀತಿ ವಿಚಾರಿಸುತ್ತಿದ್ದ ಮಹಾಸ್ವಾಮಿಯವರ ಭಾವವನ್ನು ಜಗತ್ತಿಗೆ ತೋರಿಸಲಿಕ್ಕೆ ಅಥವಾ ಬ್ರಹ್ಮರಾಕ್ಷಸನನ್ನು ಉದ್ಧರಿಸಿದ ಬ್ರಹ್ಮಚರ್ಯ ಮೂರ್ತಿಯ ಕೀರ್ತಿಯನ್ನು ಹೊಗಳುವದಕ್ಕೆ ಕೋಳಿಗಳು ಕೂ, ಕೂ, ಕೂ, ಎಂದು ಕೂಗಿದವು. ಜಗತ್ತಿನ ಅತಿ ಕರ್ತತ್ವಶಾಲಿಯೆನಿಸಿದ ಮಹಾತ್ಮಾ ಭಾಸ್ಕರನು ಮಡಿವಾಳಸ್ವಾಮಿಗಳು ಮಾಡಿದ ಈ ಅಘಟಿತ ಘಟನೆಯನ್ನು ಅತಿ ಪ್ರಯತ್ನದಿಂದ ನೋಡಲೆಳಿಸಿದಂತೆ ತನ್ನ ವಕ್ರದೃಷ್ಟಿಯ ಕಿರಣಗಳನ್ನು ಜಗತ್ತಿನಲ್ಲಿ ಕೆಡವಲಾರಂಭಿಸಿದನು. ಸೂರ್ಯೋದಯವಾಗುವದೊಂದೇ ತಡ ಮೊದಲೇ ತಾನು ಯೋಚಿಸಿದಂತೆ ತನ್ನ ಮನೆಯಲ್ಲಿ ಉಳಿದುಕೊಂಡ ಸಾಧುಗಳ ಗತಿಯನ್ನು ಕಾಣಲು ಆ ಸನ್ಮಿತ್ರ ಸಾವುಕಾರನು ಸ್ವಾಮಿಯುವರು ಇದ್ದ ಮನೆಗೆ ಧಾವಿಸಿದನು.

ಮಹಾಸ್ವಾಮಿಯವರು ಎದ್ದು ಕೂಡ್ರುವದಕ್ಕೂ ಆ ಶೆಟ್ಟಿಯು ಬರುವ ದಕ್ಕೂ ಕೂಡಿತು. ಆಸ್ವಾಮಿಯವರು ಆಶೆಟ್ಟಿಯನ್ನು ಕುರಿತು ಏನು ಶೆಟ್ಟರೇ ಇಲ್ಲಿ ನನ್ನನ್ನು-ಮಲಗಿಸಿ ಏನು ಮಾಡಬೇಕೆಂದಿದ್ದಿರಿ ನಿಮಗೆ ಈ ರೀತಿ ಬುದ್ಧಿ ಎಲ್ಲಿಂದ ಹುಟ್ಟಿತು. ನಿಮಗೆ ಈ ವಿಷಯ ಗೊತ್ತಿದ್ದರೂ

ನನಗೆ ಏಕೆ ತಿಳಿಸಲಿಲ್ಲಾ ನಮ್ಮಂಥ ಅಥಿತಿಗಳು ಸತ್ತರೆ ನಿಮಗೆ ಸಂತೋಷವೇ ? ಎಂದು ಗರ್ಜಿಸಿದರು. ಈ ರೀತಿ ಗರ್ಜಿಸಿದ ಸ್ವಾಮಿಯವರಿಗೆ ಆ ಶೆಟ್ಟಿಯು ಸಾಷ್ಟಾಂಗ ಪ್ರಣಾಮ ಮಾಡಿ ಯೋಗಿವರ್ಯರಾದ ಅವರಿಗೆ ಅದು ಮಹತ್ವದ ವಿಷಯವಲ್ಲವೆಂದು, ಮತ್ತು ತಮ್ಮನ್ನು ಆ ಬ್ರಹ್ಮರಾಕ್ಷಸನ ಭಾದೆಯಿಂದ ಉದ್ದರಿಸಬೇಕೆಂದು ಬೇಡಿಕೊಂಡನು. ಆಗ ಸ್ವಾಮಿಯವರು ಶೆಟ್ಟರೇ ಚಿಂತಿಸಬೇಡಿ ಆ ಬ್ರಹ್ಮರಾಕ್ಷಸ ಭಾದೆಯಿಂದ ದೂರಾಗಬೇಕಾದರೆ ಹತ್ತುಸಾವಿರ ರೂಪಾಯಿಗಳು ಬೇಕು. ಎಂದು ಹೇಳಲು ಅದಕ್ಕೆ ಒಪ್ಪಿ ಸಾವುಕಾರನು ೧೦ ಸಾವಿರ ರೂಪಾಯಿ ತಂದು ಮಡಿವಾಳಸ್ವಾಮಿಯವರ ಮುಂದೆ ಇಟ್ಟು ನಮಸ್ಕರಿಸಲು ಅದಕ್ಕೆ ಮಹಾಸ್ವಾಮಿಯವರು ಆ ಶೆಟ್ಟಿಗೆ ಒಬ್ಬ ಆಚಾರ್ಯನನ್ನು ಕರೆಯಿಸೆಂದು ಹೇಳಲು ಮಹಾಸ್ವಾಮಿಯವರ ಆಜ್ಞಾನುಸಾರವಾಗಿ ಆ ಸನ್ಮಿತ್ರ ಸಾವುಕಾರನು ಒಬ್ಬ ಪುರಾಣಿಕನನ್ನು ಕರೆಯಿಸಿ ಅವರ ಹೇಳಿಕೆಯಂತೆ ಅವನಿಂದ ಸ್ಕಂದ ಪುರಾಣವನ್ನು ಹೇಳಿಸಿದನು. ಮರುದಿವಸ ಮಹಾಸ್ವಾಮಿಯವರು ಆ ಸನ್ಮಿತ್ರ ಸಾವುಕಾರನಿಂದ ಸನ್ಮಾನಿತರಾಗಿ ಅಲ್ಲಿಂದ ಮುಂದಕ್ಕೆ ಪ್ರಯಾಣ ಬೆಳಸಿದರು.

ಈ ರೀತಿ ಪರಾರ್ಥಕಾರ್ಯ ಕೈಕೊಂಡ ಲೋಕೋದ್ಧಾರಕ ವ್ಯಕ್ತಿಗಳಾದ ಮಡಿವಾಳ ಶಿವಯೋಗಿಗಳು ತಮ್ಮ ಲೀಲೆಯಿಂದ ಅಷ್ಟು ಕಾರ್ಯಗಳನ್ನು ಜಗತ್ತಿಗೆ ತೋರಿಸುತ್ತ ಅಲ್ಲಲ್ಲಿ ಜನಪ್ರಿಯರಾಗುತ್ತ ದಕ್ಷಿಣಕ್ಕೆ ಸರಿದರು

ಶ್ರೀಗುರು ಮಡಿವಾಳಸ್ವಾಮಿಯವರು ಆಕಾಶ ಚಿದಂಬರರ ಸುರಮ್ಯವಾದ ಸ್ಥಾನ ನೋಡಿಕೊಂಡು ಅಲ್ಲಿಂದ ದೇಶ-ದೇಶಗಳನ್ನು ತಿರುಗುತ್ತಾ ಹಿಂದುಸ್ಥಾನದ ದಕ್ಷಿಣದ ಪವಿತ್ರ ಕ್ಷೇತ್ರವಾದ ರಾಮೇಶ್ವರಕ್ಕೆ ಬಂದರು. ಅಲ್ಲಿ ಬಂದ ಕೂಡಲೆ ಪ್ರಪಂಚದ ಸ್ವಾಭಾವಿಕ ನಿರ್ಮಿತ ಸೃಷ್ಟಿಚಮತ್ಕಾರವನ್ನು ನೋಡುವ ಕುತೂಹಲವುಳ್ಳ ಮಹಾತ್ಮಾ ಮಡಿವಾಳಸ್ವಾಮಿಯವರು ರಾಮಾಯಣ ಕಥಾಭಾಗದ ಸೇತುಬಂಧನ ಭಾಗವು ನೆನಪಾಗಿ ಹೃದಯದಲ್ಲಿ ವಿಚಾರ ತರಂಗಗಳೇಳಲಾರಂಭಿಸಿದವು. ಶ್ರೀ ರಾಮಚಂದ್ರನ ತಾಯಿಯಾದ ಕೈಕೇಯಿಯು ವಚನ ಪೂರ್ತಿಗಾಗಿ ವನವಾಸಿತನಾದ ಶ್ರೀ ರಾಮನ ಪತ್ನಿ ಜಗನ್ಮಾತೆ ಸೀತಾದೇವಿಯು ರಾವಣನಿಂದ ಅಪಹರಿತಳಾದ ಮೇಲೆ

ಅವಳ ಶೋಧ ಹೂಡಿದ ಹನುಮಂತನಿಂದ ವಿನಂತಿ ಮಾಡಿಕೊಳ್ಳಲ್ಪಟ್ಟ ರಾಮನು ವಾನರ ಸೇನಾಸಮೇತನಾಗಿ ಬಂದು ಸೇತುಬಂಧನದ ಕಾಲಕ್ಕೆ ತನ್ನ ವಿಜಯ ಮಾರ್ಗ ಸರಳು ಮಾಡಲು ಅಲ್ಲಿ ಸ್ಥಾಪಿಸಿದ ಪರಮೇಶ್ವರನ ಮೂರ್ತಿಯ ದರ್ಶನ ತಗೆದುಕೊಂಡು ರಾಮನಿಂದ ರಚಿಸಲ್ಪಟ್ಟ ಸೇತು ಬಂಧನ ಚಮತ್ಕಾರ ನೋಡಿ ಆನಂದಿತರಾಗಿ ಸಮುದ್ರ ಸ್ನಾನ ಮಾಡಿ ಮುಂದೆ ಸಾಗಿದರು.

ಶ್ರೀರಾಮ ಸೇತು ಬಂಧನದ ಚಮತ್ಕಾರವನ್ನು ನೋಡಿದ ಮಹಾ ಸ್ವಾಮಿಯವರಿಗೆ ಮನಸ್ಸಿನಲ್ಲಿ ಕಪಿಗಳು ತೋರಿದ ರಾಮಭಕ್ತಿಯು ಮನಸ್ಸಿ ನಲ್ಲಿ ಹೊಳೆಯದೆ ಇರಲಿಲ್ಲಾ. ಆವರು ಹನುಮಂತನ ಸ್ವಾಮಿಭಕ್ತಿಯನ್ನೂ ರಾಮಚಂದ್ರನ ದೇವ ವಿಶ್ವಾಸವನ್ನೂ, ತಲೆಯಲ್ಲಿ ತೂಗಿ ನೋಡುತ್ತ ಮನ ಸ್ಸಿನಲ್ಲಿ ಆನಂದ ಹೊಂದುತ್ತ ದಾರಿಹಿಡಿದು ಮುಂದೆ ಪಶ್ಚಿಮಕ್ಕೆ ಸರಿದರು.

ಅವರು ಪಶ್ಚಿಮ ದಂಡೆಯ ಅತಿ ಸುಂದರವಾದ ವನಸಿರಿಯನ್ನು ನೋಡುತ್ತ ಸಮುದ್ರದ ದಂಡೆಗುಂಟ ಸಾಗಿ ಮಲಬಾರ, ಸ್ತ್ರಿಮಲಯಾಳ, ಕಾಲಿಕತ್ತ, ಮೊದಲಾದವುಗಳನ್ನು ನೋಡುತ್ತಾ ಮುಂದಕ್ಕೆ ಭೂಲೋಕದ ಕೈಲಾಸವಾದ ಗೋಕರ್ಣಕ್ಕೆ ಬಂದು ಮತ್ತೊಮ್ಮೆ ತಲುಪಿದರು. ನೋಡಿ ವಾಚಕರೇ, ಗೋಕರ್ಣವೆಂಬ ಹೆಸರು ತೆಗೆದುಕೊಂಡಾಗಲೇ ನೀವು ಆಶ್ಚರ್ಯ ಚಕಿತರಾಗಬಹುದು. ಈ ಕ್ಷೇತ್ರದ ವರ್ಣನೆ ಹಿಂದೊಮ್ಮೆ ಬಂದಿದೆ. ಆದರೆ ಇದರ ಮಹತ್ವಕ್ಕೆ ಅನುಸರಿಸಿ ಮಹಾಸ್ವಾಮಿಯವರು ಶಿವನ ದರ್ಶನಕ್ಕಾಗಿ ಮತ್ತೊಮ್ಮೆ ಹಾತೊರೆದದ್ದು ತಪ್ಪಲ್ಲ. ಭಕ್ತ ಶ್ರೇಷ್ಠ ರಾವಣನ ತಾಯಿ ಯಾದ ಕೇಶಿಕೆಯು ಪೂಜಿಸುತ್ತಿದ್ದ ಮಳಲಿನ ಲಿಂಗವು ಸಮುದ್ರನಾಥನ ತೆರೆಗಳಿಂದ ಸೆಳೆದೊಯ್ಯಲ್ಪಟ್ಟ ನಂತರ ಅದೇ ಚಿಂತನೆಯಲ್ಲಿ ಮಲಗಿದ್ದ ಮಾತೆಯ ದರ್ಶನಕ್ಕಾಗಿ ಯಾವದನ್ನೂ ಅರಿಯದ ರಾವಣನು ಹೋದನು. ಹೀಗೆ ಅಕಸ್ಮಾತ್ತಾಗಿ ಹೋದ ರಾವಣನು ತನ್ನ ತಾಯಿಯ ವಚನ ಪೂರ್ತಿ ಗಾಗಿ ಪರಮಾತ್ಮನ ಇಷ್ಟಲಿಂಗವನ್ನು ತರಲಿಕ್ಕೆ ಹೋಗಿ ಮೋಹ ಪರವಶ ನಾಗಿ ಪಾರ್ವತಿಯನ್ನು ಶಿವನಲ್ಲಿ ಬೇಡಿ ಪಡೆದು ಅವಿಶ್ವಾಸದಿಂದ ಭದ್ರ ಕಾಳಿಯಿಂದ ತಿರುಗಿಬಿಟ್ಟು ಮಂಡೋದರಿಯೇ ಪಾರ್ವತಿಯೆಂದು ನಂಬಿ

ಲಗ್ನವಾಗಿ ತಾಯಿಗೆ ಹೇಳಲಿಕ್ಕೆ ಹೋದಾಗ ತಾಯಿಯಿಂದ ತಿರಸ್ಕರಿಸಲ್ಪಟ್ಟು ಕಡೆಯ ಸಾರಿ ಅಘೋರ ತಪಶ್ಚರ್ಯ ಮಾಡಿ ಕೈಲಾಸಗಿರಿಯನ್ನೈತ್ತಿ ಪರಶಿವ ಇಷ್ಟಲಿಂಗವನ್ನು ತಂದು ದೇವತೆಗಳ ಮೋಸದಿಂದ ನೆಲಕ್ಕೆ ಇಟ್ಟು ಅದನ್ನು ಕೀಳಲೆತ್ನಿಸಿ ಶಿವನಿಂದ ಹೊಗಳಿಸಿಕೊಂಡ ಮಹಾತ್ಮೆಯಸ್ಥಳವಾದ ಗೋಕರ್ಣ ವನ್ನು ಕಂಡು—ಸ್ವಾಮಿಯವರು ಮಹಾಬಲೇಶ್ವರನನ್ನು ಪೂಜಿಸಿ ತಂದೆಯ ಲೀಲೆಗಳನ್ನು ಕೊಂಡಾಡಿ ಆನಂದಭರಿತರಾದರು. ತಮ್ಮ ತಂದೆಯ ಆತ್ಮ ಲಿಂಗವನ್ನು ಭೂಮಿಯಲ್ಲಿ ಸ್ಥಾಪಿಸಿದ ರಾವಣನ ಭಕ್ತಿಯನ್ನು ಕೊಂಡಾಡಿ ಅವನು ಅದಕ್ಕೆ ಭೂಕೈಲಾಸವೆಂದು ಹೆಸರು ತಂದದ್ದಕ್ಕೆ ಅವನನ್ನು ಅಭಿ ವಂದಿಸಿದರು. ಈ ರೀತಿ ಮಹಾಸ್ವಾಮಿಯವರು ದೇಶ ಸಂಚರಿಸಿ ಕಾಶಿಗೆ ಬಂದು ತಲುಪಿದರು. ಅದಕ್ಕಂತೆಯೇ ಮಹಾತ್ಮರು ಹೀಗೆ ಹೇಳುತ್ತಾರೆ.

ವಿಚಾರ ಸಾಗರ ಶರಣರ ಅರಿವು | ಶಾಂತಿಸಾಗರ ಜ್ಞಾನವು | ವೈರಾ
ಗ್ಯದ ಬೀಡು ಶರಣರ
ಅಂತರಂಗ। ಇದುವೇ ದೇವ ಶಂಭೂತ ಶರಣರ ಮುಖ್ಯ ದೇಹ ||

ಮಹಾತ್ಮರು ವಿಚಾರದ ತವರಮನೆಯು ಅವರು ಶಾಂತಿ ಸಮುದ್ರ ವೆಂದರೂ ಅಡ್ಡಿಯಿಲ್ಲ. ಅವರ ವೈರಾಗ್ಯವು ಬಂಗಾರಕ್ಕೆ ಕುಂದಣವನ್ನಿಟ್ಟಂತೆ ಅವರಲ್ಲಿ ವೈರಾಗ್ಯವಿದ್ದರೆ ಬ್ರಹ್ಮಚರ್ಯದ ತೇಜೋ ಬಲದಿಂದ ಬೆಳಗುತ್ತಾರೆ.

ಈ ರೀತಿ ಮಹಾತ್ಮಾ ಮಡಿವಾಳ ಶಿವಯೋಗಿಗಳು ಸತ್ಸಮಾಗಮ ಪುಣ್ಯ ಕ್ಷೇತ್ರದ ದರ್ಶನವೆಂಬ ಮುಕ್ತಿ ಮಾರ್ಗದ ಸೋಪಾನವನ್ನು ಹತ್ತಿ ಜ್ಞಾನಸಾಧನೆ ಮಾಡಿಕೊಂಡು ಅದರೊಡನೆ ಭಕ್ತೋದ್ಧಾರ ಮಾಡುವರು. ಮಹಾತ್ಮರ ದಿವ್ಯ ದೈವೀತೇಜಸ್ಸು ಪ್ರಕಾಶಕ್ಕೆ ಬರಬೇಕಾದರೆ ಅವರನ್ನು ನಿಂದಿಸುವ ನಿಂದಕ ವೃಂದವು ಬೇಕೇಬೇಕು. ಅದರಂತೆ ಪಂಡಿತರು ಸಭೆ ಯಲ್ಲಿ "ವಾದೆ ವಾದೇ. ಜಾಯತಿ ತತ್ವಬೋಧ" ಎಂಬಂತೆ ವಾದ ಮಾಡಿ ಗೆಲಿದು ವಿಶ್ವಪಂಡಿತ ಸಭೆಯ "ವಿಜಯ"ಯೆಂಬ ಹೆಸರು ಪಡೆದರು. ಇದೆ ಲ್ಲವು ಮಹಾತ್ಮಾ ಮಡಿವಾಳ ಶಿವಯೋಗಿಗಳ ಆತ್ಮೀಯ ತೇಜಸ್ಸು

ಬ್ರಹ್ಮಚರ್ಯದ ತೇಜೋಬಲದ ಬೆಳಕು ಒಡಮೂಡಿ ವಿದ್ಯೆಯ ರೂಪದಲ್ಲಿ ಜಗತ್ತಿನಲ್ಲಿ ಪ್ರಕಾಶಮಾನವಾಗಿತ್ತು ಎಂದು ಹೇಳಿದರೆ ಏನೂ ಅಡ್ಡಿಯಿಲ್ಲ.

ಸಾಧು ವೇದದ ಮೂರ್ತಿ ಎನಿಸುತೆ |
ಭೂಮಿ ಪತಿಗಳಿರಾ ಮಾನ ಹೊಂದುತೆ |
ಸ್ವಾಮಿ ತಿರುಗಿದ ತನ್ನ ತಾಯಿಯ ನಿತ್ಯ ಸ್ಥಾನದಲಿ ||

ಭಕ್ತಿಬಲಿಯನು ಬೀಸಿ ಬಂಧಿಸಿದನು ದಿವ್ಯ |
ಮುಕ್ತಿ ಮಹೇಂದ್ರಜಾಲದೊಳು ಭಕ್ತ ಜಗವನು |
ಸಮರಸವಹ ವಿರಕ್ತಿಯೊಳು ಮಡಿವಾಳೇಶ್ವರನು ಚಿತ್ತೈಸಿ ||

ಶ್ರೀಗುರು ಮಡಿವಾಳ ಶಿವಯೋಗಿಗಳು ತೀರ್ಥಾಟನೆಯ ಪುಣ್ಯಯೋಗ ಪರಿಪೂರ್ಣರಾಗಿ ತ್ರಿನೇತ್ರನ ವಾಸಸ್ಥಾನವಾದ ಅಮರ ಗಂಗೆಯಿಂದ ಪವಿತ್ರತೆಯನ್ನು ಹೊಂದಿದ ಅಮರಗಣಂಗಳ ದೇವ ವಿಶ್ವೇಶನ ಮುಖ್ಯ ಸ್ಥಾನವಾದ ಕಾಶೀಪುರಕ್ಕೆ ಪುನಃ ಆಗಮಿಸಿದ್ದು ನಮ್ಮ ವಾಚಕರು ಮರೆತಿರಲಿಕ್ಕಿಲ್ಲ. ಕೆಲಕಾಲ ಕಳೆದ ನಂತರ ಮಡಿವಾಳ ಸ್ವಾಮಿಯವರು ಮತ್ತೊಮ್ಮೆ ತೀರ್ಥಾಟನೆ ಕೈಕೊಳ್ಳಲು ಮನಸ್ಸು ಮಾಡಿದರು. ಅವರು ಕಾಶಿಯಿಂದ ಹೊರಟು ಉತ್ತರ ಹಿಂದುಸ್ತಾನದ ಮುಖ್ಯ ಸಂಸ್ಥಾನವಾದ ಕಾಶ್ಮೀರಕ್ಕೆ ಹೋದರು. ಅಲ್ಲಿಯ ಅರಸನು ಇವರನ್ನು ಕಂಡ ಕೂಡಲೆ ಭಕ್ತಿಪೂರ್ವಕವಾಗಿ ಸತ್ಕರಿಸಿದನು ಕಾಶ್ಮೀರ ದೇಶದ ಅರಸನಿಂದ ಸನ್ಮಾನಿತರಾದ ಮಹಾಸ್ವಾಮಿಯವರು ಹಿಮಾಲಯದ ದಂಡೆಗುಂಟ ಪ್ರವಾಸ ಮಾಡುತ್ತ ಭೂತಾನ, ನೇಪಾಳ, ಸಂಸ್ಥಾನದ ಅರಸರ ದರ್ಶನಕ್ಕೆ ಹಾತೊರೆದರು. ಅವರು ನೇಪಾಳಕ್ಕೆ ಹೋದಾಗ್ಗೆ ಅವರು ಅರಸನಿಂದ ಸನ್ಮಾನಿತರಾಗಿ ಅವನ ಆದರಾಥಿತ್ಯ ಸ್ವೀಕರಿಸಿದರು. ಆ ಅರಸನು ಭಕ್ತಿ ಸ್ವಾಮಿಯವರನ್ನು ತನ್ನಲ್ಲಿ ಇಟ್ಟುಕೊಂಡು ಕೆಲ ದಿವಸಗಳವರೆಗೆ ಭಕ್ತಿಯಿಂದ ಪೂಜಿಸಲಾರಂಭಿಸಿದನು. ಅದು ಅಲ್ಲದೆ ಅವನು ಅವರಿಗೆ ಒಂದು ದಿವಸ ಒಂದು ಸುವರ್ಣ ಮಂಟಪವನ್ನು ಭಕ್ತಿಪುರಸ್ಕರವಾಗಿ ನೀಡಿದನು. ಆಗ ಸ್ವಾಮಿಯವರು ಇದು ಯಾರಿಗೆ ಎಂದು ಕೇಳಲಾಗಿ ನಿಮಗೆ ಎಂದು ಉತ್ತರ ಕೊಟ್ಟನು. ಆದರೆ ನನಗೆ

ಎಂದು ನೀರು ಬಿಡು ಎಂದು ಹೇಳಲಾಗಿ ಅರಸನು ಶಿವಾರ್ಪಣಮಸ್ತು ಎಂದು ನೀರು ಬಿಟ್ಟನು ಕೈಲಾಸ ಗಿರಿಯನ್ನು ಮುಟ್ಟುವದು ಸಾಮಾನ್ಯ ಕೆಲಸವಲ್ಲ.

ನೋಡಿವಾಚಕ ಮಹಾಶಯರೇ, ಮಾನವ ಜನ್ಮ ಧಾರಿಣಿಯಾದ ಮನುಷ್ಯನು ತನ್ನ ಪ್ರಯತ್ನದಿಂದ ಮಾಡಬಾರದಂಥ ಕಾರ್ಯಗಳನ್ನೂ ಕೂಡ ಸಿದ್ಧಿಗೆ ಹಚ್ಚುತ್ತಾನೆ. ಮಾನವನ ಯೋಗ ಸಾಮರ್ಥ್ಯದ ಬಲದ ಕೂಡ ವಿಶ್ವದ ಅತಿ ಪ್ರಾಮುಖ್ಯತೆಯ ಬ್ರಹ್ಮಚರ್ಯವು ಕೂಡಿತೆಂದರೆ ಜಗತ್ತಿನಲ್ಲಿಯ ಚರಾಚರ ವಸ್ತುಗಳನ್ನು ತನ್ನ ಆಧೀನದಲ್ಲಿ ಇಟ್ಟುಕೊಳ್ಳಲು ಶಕ್ತನಾಗುತ್ತಾನೆ. ಈಗ ನಮ್ಮ ಚರಿತ್ರನಾಯಕರಾದ ಶ್ರೀಗುರು ಮಡಿವಾಳ ಶಿವಯೋಗಿಗಳು ತಮ್ಮ ಯೋಗನಿಷ್ಠೆಯ ಬ್ರಹ್ಮಚರ್ಯದ ತೇಜೋಬಲ ದಿಂದ ಕಲಿಯುಗದ ತಜ್ಞರ ತವರಮನೆಯಾದ ಯುರೋಪಖಂಡದ ಮಹಾನ್ ಮಹಾನ್ ವಿದ್ವಾನ್ನರಿಂದ ಮಾಡಲ್ಪಟ್ಟು ವಿಶ್ವಪ್ರಯತ್ನಕ್ಕೆ ಮುಟ್ಟಲಸಾಧ್ಯವಾದ ಕೈಲಾಸಗಿರಿಯನ್ನು ಮುಟ್ಟಲು ಶಕ್ತರಾದರೆ ಯಾವ ಆವರಣವೂ ಇಲ್ಲದಲೇ ಜಗತ್ತಿನ ಹಿಮದ ತವರ ಮನೆಯಾದ ಭಾರತದ ಪವಿತ್ರ ಗಿರಿಯೆನಿಸುವ ಹಿಮಗಿರಿಯನ್ನು ಏರಿದ ಮನುಷ್ಯನಿಗ ದೇವತ್ವವನ್ನು ಯಾವ ಭಾರತೀಯನು ಕೊಡಲಿಕ್ಕಿಲ್ಲ ?

ಈ ರೀತಿ ಜಗತ್ತಿನ ಅತಿ ಪವಿತ್ರ ಸ್ಥಾನವಾದ ಹಿಮಗಿರಿ, ಗಂಗೋತ್ರಿ, ಕೈಲಾಸ ದರ್ಶನಕ್ಕೆ ಹಾತೊರೆದ ಮಹಾಸ್ವಾಮಿಯವರೊಡನೆ ನಾವು ಸ್ವತಃ ಸಂಚಾರ ಅಸಾಧ್ಯವಿದ್ದರೂ ಓದುವಾಗ ಅವರ ಚರಿತ್ರೆಯ ಮುಖ್ಯ ಪುಣ್ಯ ಭಾಗದಲ್ಲಿಯಾದರೂ ಸಂಚರಿಸಿ ಕೃತಾರ್ಥರಾಗುವಾ ಈ ಸಾರೆ ಮಹಾ ಸ್ವಾಮಿಯವರು ಪರಶಿವನ ಸತಿ ದೇವಯಾನಿಯಾದ ಅಮರ ಗಂಗಾಮಾತೆಯ ಉಗಮಸ್ಥಾನವಾದ ಮಾನಸ ಸರೋವರದಲ್ಲಿ ಸ್ನಾನ ಮಾಡಿ ತಮ್ಮ ಹೃದಯ ಪರಿಸುದ್ಧಿಸಿಕೊಂಡರು. ಅಲ್ಲಿಂದ ಕೈಲಾಸಗಿರಿಗೆ ಹಿಂದಿರುಗಿ ಅಲ್ಲಿಯ ಪುಣ್ಯ ಋಷಿಗಳ ದರ್ಶನ ಮಾಡಿಕೊಂಡು ಹಾಗೆಯೇ ತಮ್ಮ ವಿಷಯವಾಗಿ ಸಂಶಯ ಗ್ರಸ್ಥನಾಗಿದ್ದ ನೇಪಾಳದರಸನ ಮನದಿಚ್ಛೆಗಾಗಿ ಅವನ ಸಂಶಯ ನಿವಾರಿ ಸುವದಕ್ಕಾಗಿ ತಿರುಗಿ ನೇಪಾಳಕ್ಕೆ ಬಂದು ಅರಸನಿಗೆ ದರ್ಶನವಿತ್ತರು. ಆಗ ಈ ಪುಣ್ಯ ಮೂರ್ತಿಯ ದರ್ಶನದಿಂದ ಅರಸನು ಆಶ್ಚರ್ಯಚಕಿತನಾದದ್ದಲ್ಲದೆ ಅವನಿಗೆ ಇವರಲ್ಲಿ ಅತಿ ಪ್ರೇಮಭಕ್ತಿ ವಿಶ್ವಾಸಗಳು ಹುಟ್ಟಿದವು. ಆಗ

ಅವನು ಸ್ವಾಮಿಯವರನ್ನು ಅತಿ ಭಕ್ತಿಯಿಂದ ಕಾಣಲಾರಂಭಿಸಿದನು. ಅವನ ಪ್ರೀತ್ಯರ್ಥದ ಮೂಲಕ ಸ್ವಾಮಿಯವರು ಅಲ್ಲಿ ಕೆಲ ದಿನ ಅರಸನ ಅತಿಥಿಗಳಾಗಿ ಉಳಿದರು. ಒಂದು ದಿವಸ ಅರಸನು ಸ್ವಾಮಿಯವರ ಕೂಡ ಮಾತನಾಡುವಾಗ ಸ್ವಾಮಿಯವರು ರಾಜೇಂದ್ರಾ ಈ ಮಂಟಪವು ಯಾರಿಗಾಗಿ ಎಂದು ಕೇಳಲು, ಅರಸನು ಗುರುವೇ ಅದು ನಿಮಗಾಗಿ ಎಂದು ಉತ್ತರವಿತ್ತನು. ಆಗ ಸ್ವಾಮಿಯವರು ಅಕ್ಕಸಾಲಿಗನನ್ನು ಕರೆಯಿಸಿ ಆ ಮಂಟಪವನ್ನು ತುಣುಕು ತುಣಕಾಗಿ ಮಾಡಿ ಬಡಬಗ್ಗರಿಗೆ ಅರಸನ ಎದುರಿನಲ್ಲಿಯೇ ದಾನಮಾಡಿದರು ಅದಕ್ಕೆ ಅರಸನು ಸಂತೋಷಭರಿತನಾದದ್ದನ್ನು ಕಂಡು ಸ್ವಾಮಿಯವರು ರಾಜೇಂದ್ರಾ ನಿನ್ನ ಇಚ್ಛೆ ಏನಾದರೂ ಇದ್ದರೆ ಕೇಳಿಕೊ ಎಂದು ಹೇಳಲಾಗಿ ಅರಸನು ಮೌನಧರಿಸಿದನು. ಆಗ ಅವನ ಇಂಗಿತ ಕಂಡು ಹಿಡಿದು ಅರಸಾ ನೀನು ಅಥವಾ ನಿನ್ನ ಮನೆತನದವರು ಹಾಲು ಮಜ್ಜಿಗೆ ಕೂಡಿಸಿ ಅದರಲ್ಲಿ ಕೈಹಾಕಿ ಮೇಲಕ್ಕೆ ಗುರುವಿನ ಹೆಸರು ತೆಗೆದುಕೊಂಡು ಎಳಿದರೆ ಅದು ಸುವರ್ಣವಾಗಲಿ ಎಂದು ಆಶೀರ್ವದಿಸಿದರು. ಈ ರೀತಿ ಅರಸನಿಂದ ಸತ್ಕರಿಸಲ್ಪಟ್ಟು ಮಹಾಸ್ವಾಮಿಯವರು ಅವನಿಗೆ ಆಶೀರ್ವಾದವನ್ನು ಕೊಟ್ಟು ಅಲ್ಲಿಂದ ಅರಸನ ಅನುಮತಿಯಂತೆ ದಕ್ಷಿಣಕ್ಕೆ ಸಾಗಿದರು. ಅಲ್ಲಿಂದ ತೀರ್ಥಕ್ಷೇತ್ರಗಳನ್ನು ತಿರುಗುತ್ತ ತಮಗೆ ಭೆಟ್ಟಿಯಾದ ಪಂಡಿತರೊಡನೆ ಚರ್ಚಿಸುತ್ತ ಅವರನ್ನು ಜಯಿಸಿ ಆಶೀರ್ವದಿಸುತ್ತ ದಕ್ಷಿಣಭಾರತದ ಮುಖ್ಯ ಸಂಸ್ಥಾನವಾದ ನಿಜಾಮನ ರಾಜ್ಯಕ್ಕೆ ಕಾಲಿಟ್ಟರು. ಆಗಿನ ಕಾಲದಲ್ಲಿ ಅರಸನಾದ ನಿಜಾಮನು ಸಲ್ಪ ದರ್ಪಿನ ಮನೋವೃತ್ತಿಯವನಿದ್ದನು. ಅವನು ಚಾರರ ಮುಖದಿಂದ ಮಹಾಸ್ವಾಮಿಯವರ ವರ್ತಮಾನವನ್ನು ತಿಳಿದುಕೊಂಡು ಇವರನ್ನು ತನ್ನ ಸೇವಕರ ಮುಖಾಂತರ ತನ್ನ ದರ್ಬಾರಕ್ಕೆ ಕರೆಯಿಸಿಕೊಂಡನು. ಮಹಾಸ್ವಾಮಿಯವರು ದರ್ಬಾರದಲ್ಲಿ ಕಾಲಿಟ್ಟಕೂಡಲೆ ಇವರ ಮುಖದ ಮೇಲಿನ ಬ್ರಹ್ಮಚರ್ಯದ-ಕಾಂತಿಯನ್ನು ನೋಡಿ-ಅರಸನು ಆಶ್ಚರ್ಯಚಕಿತನಾದನು.

ವಾಚಕರೇ ಒಬ್ಬ ದಿಗಂಬರರೂಪಿ ಸಾಧುವನ್ನು ಕಂಡು ಏಕೇ ಆಶ್ಚರ್ಯಚಕಿತರಾದರೆಂದು ನೀವು ಕೇಳಬಹುದಲ್ಲವೇ ? ಇಲ್ಲಿಯವರೆಗೆ ಮಹಾ

ಸ್ವಾಮಿಯವರ ಚರಿತ್ರ ಲಕ್ಷಗೊಟ್ಟು ಓದಿದ್ದರೆ ತಾವು ಮನಗಾಣಬಹುದು. ಈ ರೀತಿ ಆಶ್ಚರ್ಯದಿಂದ ಕೂಡಿದ ಅರಸನಲ್ಲಿ ಮಹಾಸ್ವಾಮಿಯವರ ವಿಷಯಕ್ಕೆ ಭಕ್ತಿ ನೆಲಿಗೊಳಿಸದೆ ಇರಲಿಲ್ಲಾ. ಅವನಲ್ಲಿ ಹುಟ್ಟಿದ ಭಕ್ತಿಯೊಡನೆ ಅವರನ್ನು ಪರೀಕ್ಷಿಸಬೇಕೆಂಬ ಭಾವನೆಯು ಹುಟ್ಟಿ ಅವರ ಸತ್ವ ಪರೀಕ್ಷೆಗಾಗಿ ಮನಸ್ಸು ಮಾಡಿದನು. ಅವನು ಮಹಾಸ್ವಾಮಿಯವರಿಗೆ ತಿಳಿಯದಂತೆ ತನ್ನ ಸೇವಕರಿಗೆ ಒಂದು ಬಂಗಾರದ ತಾಟಿನಲ್ಲಿ ಹಣ್ಣು ಹಂಪಲಗಳನ್ನು ಇನ್ನೊಂದು ತಾಟಿನಲ್ಲಿ ಗೋಮಾಂಸವನ್ನು ತುಂಬಿ ಅದರ ಮೇಲೆ ಬಿಳಿಯ ವಸ್ತ್ರಮುಚ್ಚಿ ಸಭೆಯಲ್ಲಿ ತಂದಿಡಲು ಆಜ್ಞೆಯನ್ನು ಮಾಡಿದನು. ನೋಡಿ-ವಾಚಕರೇ ಸುಜನರಿಗೆ ಎಲ್ಲಿಹೋದರೂ ಪರೀಕ್ಷೆಕಾಲವಿದೆ. ಅದರಂತೆ ಮಹಾಸ್ವಾಮಿಯವರ ಸತ್ವ ಪರೀಕ್ಷೆಕಾಲ ಈಗ ನಿಜಾಮನ ದರ್ಬಾರದಲ್ಲಿ ಬಂದಿತು. ಎಂಥ ಪ್ರಸಂಗಬಂದರೂ ತನ್ನ ಕರ್ತವ್ಯದ ಪ್ರಖರ ತೇಜದಿಂದ ಜಗತ್ತು ಬೆಳಗುವ ಸೂರ್ಯನಂತೆ ಪರೀಕ್ಷೆ ಎಂಬ ವರೆಗಲ್ಲಿನಿಂದ ಮಹಾತ್ಮರ ಮಹಾತ್ಮೆಯು ಪ್ರಖರ ತೇಜವು ಜನರ ಕಣ್ಣಿಗೆ ಕಂಡಿತು.

ಮೇಲೆ ಹೇಳಿದಂತೆ ಮಹಾತ್ಮರ ಸತ್ವಪರೀಕ್ಷೆಗಾಗಿ ಮನಸ್ಸುಮಾಡಿ ಮಹಾತ್ಮಾ ಮಡಿವಾಳ ಶಿವಯೋಗಿಗಳನ್ನು ಕುರಿತು ನಿಜಾಮನಿಂತೆಂದನು. "ಸನ್ಯಾಸಿಗಳೇ ನೀವು ಯಾರು ನಿಮ್ಮ ಹೆಸರೇನು ನಿಮ್ಮ ಮುಖ್ಯಸ್ಥಾನವು ಯಾವದು" ಎಂದು ಗರ್ಜಿಸಿದನು. ಆಗ ಸ್ವಾಮಿಯವರು ಆ ಅರಸನನ್ನು ಕುರಿತು " ಮಹಾರಾಜ ನಾನೊಬ್ಬ ಮಾನವ ಪ್ರಾಣಿಯು ನನ್ನವಾಸಸ್ಥಾನವು ವಿಶ್ವಜಗತ್ತು ನಾನು ಅಜಾತನು"—ಎಂದು ಹೇಳಿ ಸುಮ್ಮನಾದರು. ಅದಕ್ಕೆ ಆ ಮಹಾರಾಜನು ಮತ್ತೆ ಸ್ವಾಮಿಯವರನ್ನು ಕುರಿತು ನಿನ್ನ ಕರ್ತವ್ಯವು ಯಾವದು ಎಂದು ಕೇಳಲು ಅದಕ್ಕೆ ಸ್ವಾಮಿಯವರು. " ಆಹಾರ ನಿದ್ರೆ" ಎಂಬವು ಮಾನವನು ಮಾಡತಕ್ಕ ಮುಖ್ಯ ಕರ್ತವ್ಯಗಳೇ ನನ್ನ ಕರ್ತವ್ಯಗಳು ಈ ರೀತಿ ಉತ್ತರ ಕೊಟ್ಟ ಮಹಾಸ್ವಾಮಿಯವರ ಮಾತಿಗೆ ಸಭೆಯ ಜನರು ನಕ್ಕರು. ನಗದೇನು ಮಾಡ್ಯಾರು ಯಾವ ಮಹಾತ್ಮನ ಅರ್ಥಗರ್ಭಿತ ಭಾಷಣದ ಭಾವವನ್ನು ತಿಳಿಯಲು ತ್ರಿಮೂರ್ತಿಗಳಿಗೂ ಕೂಡ ಅಶಕ್ತವಾಗಿದೆಯೋ ಅಂಥ ಮಹಾತ್ಮರ ಭಾಷಣವು ಈ ಅರಸನಿಗೆ ತಿಳಿಯಲು ಸಾಧ್ಯವಾದೀತೆ. ಈ ರೀತಿ ಪ್ರಶ್ನೋತ್ತರಗಳು ನಡೆದಿರುವಾಗ ಮೊದಲೇ ಆ

ಜ್ಞಾಪಿಸಿದ ಮಹಾರಾಜನ ಅಪ್ಪಣೆಯಂತೆ ಆ ದರ್ಬಾರದಲ್ಲಿ ಎರಡು ತಾಟು ಗಳನ್ನು ತಂದು ಮಹಾಸ್ವಾಮಿಯುವರ ಮುಂದೆ ಇಟ್ಟರು ಆಗ ಸ್ವಾಮಿ ಯುವರು ಆ ತಂದಿಟ್ಟ ತಾಟುಗಳಲ್ಲಿ ಮಾಡುವ ಫಲಹಾರ ಜೀನಸುಗಳನ್ನು ತಿಳಿದು ಕೊಂಡು ತಮ್ಮ ಗುರುವಿನ ಹೆಸರು ತೆಗೆದುಕೊಂಡು ನೀರು ಪ್ರಾಕ್ಷಾ ಲನ ಮಾಡಿದರು. ಗುರುವಿನ ನೀರಿನ ಪ್ರಾಕ್ಷಾಲಾನದಿಂದ ಅದರಲ್ಲಿ ಇದ್ದ ಗೋಮಾಂಸವು ಕೆಂಪು ದಾಸಾಳದ ಹೂವಾಗಿ ಪರಿಣಮಿಸಿತ್ತು. ಅದನ್ನು ಕಂಡು ಮೊದಲೇ ಭಕ್ತಿಯುತನಾದ ನಿಜಾಮನು ಗುರುಗಳ ವಿಷ ಯವಾಗಿ ಅತಿ ಪೂಜ್ಯತೆಯನ್ನು ತಳೆದು ಅವರಿಗೆ ನಮಸ್ಕರಿಸಿ ತಾನು ಅವರ ಸತ್ವ ಪರೀಕ್ಷೆಗಾಗಿ ಮಾಡಿದ ಆಟಕ್ಕಾಗಿ ಕ್ಷಮೆ ಬೇಡಿದನು ಮತ್ತು ಮಹಾಸ್ವಾಮಿಯುವರನ್ನು ಅತಿ ಭಕ್ತಿಯಿಂದ ಕಾಣಲಾರಂಭಿಸಿದನು. ಅನಂತರ ಮಹಾಸ್ವಾಮಿಯುವರು ನಿಜಾಮನ ಪೂಜ್ಯವಸ್ತುವಾಗಿ ಅವನ ಆದರಾತಿಥ್ಯವನ್ನು ಕೆಲ ದಿವಸ ಹೊಂದಿ ಅಲ್ಲಿಯೇ ಇದ್ದು ಮುಂದೆ ಹೋಗಲು ಅವನಿಂದ ಸಮ್ಮತಿಯನ್ನು ಪಡೆದರು ಆಗ ನಿಜಾಮನು ಗುರುವೇ ನಿನ್ನ ವಿಯೋಗ ದುಃಖವನ್ನು ನಾನೇಂತು ಸಹಿಸಲಿ ನಿಮ್ಮ ಇಚ್ಛೆ ಎನಾದರೂ ಇದ್ದರೆ ಹೇಳಿ ಪೂರೈಸುವೆನು ಎಂದು ಹೇಳಲು ಮಹಾಸ್ವಾಮಿಯುವರು ಅರಸನೇ ಕಾಲಗತಿಗನುಸಾರವಾಗಿ ನೀನು ಎಲ್ಲವನ್ನೂ ಜರುಗಿಸಿದೆ ಇದ ರಲ್ಲಿ ಯಾರದು ತಪ್ಪಲ್ಲ ನಿನ್ನಿಚ್ಛೆಯೇ ಹೀಗಿದ್ದರೆ ನನಗೆ ಕಫನಿ, ಕಟಾವಿ ಗೆಗಳನ್ನು ಕೊಡು ಎಂದು ಹೇಳಿದರು

ಮಹಾಸ್ವಾಮಿಯುವರ ಇಚ್ಛೆಯಂತೆ ನಿಜಾಮನು ನಡೆದು ಕೊಂಡನು ಮುಂದೆ ಮಹಾಸ್ವಾಮಿಯುವರ ಪ್ರಯಾಣವು ಯಾವ ಕಡೆಗೆ ಎಂದು ಕೇಳಲು ಅವರು ಅರಸನೇ ನಾನಿನ್ನು ಮಕ್ಕಾಯಾತ್ರೆಗೆ ಹೋಗುವೆನೆಂದು ಹೇಳಿ ಅರಸನನ್ನು ಆಶೀರ್ವದಿಸಿ ಹೊರಟರು.

ಈ ರೀತಿ ಅರಸನನ್ನು ಆಶೀರ್ವದಿಸಿ ಹೊರಟ ಮಹಾಸ್ವಾಮಿಯುವರು ಗುಜರಾಥ, ಕಚ್ಛ, ಕಾಠೇವಾಡಗಳ ಮೇಲಿಂದ ಹಾಯ್ದು ಸಿಂಧ, ಬಲೂಚಿ ಸ್ತಾನಗಳಲ್ಲಿ ಸಂಚರಿಸಿ ಜಗತ್ತಿನಲ್ಲಿ ಮುಸಲ್ಮಾನರ ಅತಿ ಶ್ರೇಷ್ಠ ಪವಿತ್ರ ಸ್ಥಾನವಾದ ಮಕ್ಕೆಗೆ ಬಂದು ತಲುಪಿದರು ನೋಡಿ ವಾಚಕರೇ ಯೋಗ ನಿಷ್ಠೆಯ ಬಲದಿಂದ ಪ್ರತಿಸೃಷ್ಟಿಯನ್ನೇ ನಿರ್ಮಿಸುವಂಥ ಶಕ್ತಿಯುಳ್ಳ ಪರ

ಮಾತ್ಮಸ್ವರೂಪಿ ಮಹಾತ್ಮರಿಗೆ ಯಾವದು ತಾನೇ ಅಸಾಧ್ಯ ? ಅಂತೆಯೇ ಮಹಾ–ಮಹಿಮರಾದ ಮಹಾತ್ಮಾ ಮಡಿವಾಳ ಸ್ವಾಮಿಗಳು ಕಾಲು ನಡಿಗೆ ಯಿಂದ ಮಕ್ಕಾಯಾತ್ರೆಯನ್ನು ಮಾಡಿದರು ಅವರು ಅರಬಸ್ತಾನದ ದೊಡ್ಡ ದೊಡ್ಡ ಉಸುಬಿನ ಬೈಲುಗಳಲ್ಲಿ ಸಂಚರಿಸುತ್ತಾ ತಮ್ಮ ದೀರ್ಘ ಪ್ರಯತ್ನದಿಂದ ಮಕ್ಕಾಯಾತ್ರೆ ಮುಗಿಸಿಕೊಂಡು ಅಲ್ಲಿಂದ ಮದೀನೆಯನ್ನು ನೋಡಿಕೊಂಡು. ಅಲ್ಲಿಂದ ಕಾಶೀವಾಡಕ್ಕೆ ಬಂದರು ಅಲ್ಲಿಂದ ಮಹಾ ಸ್ವಾಮಿಯವರು ಸಂಚರಿಸುತ್ತಾ ಮೈಸೂರ ಸಂಸ್ಥಾನದಲ್ಲಿ ಇರುವ ಬಾಣಾ ವರಕ್ಕೆ ಬಂದರು ಅಲ್ಲಿ ಮಹಾಸ್ವಾಮಿಯವರು ಬಂದಾಗ ತಮ್ಮ ಯೋಗ ನಿಷ್ಠೆಯಿಂದ ಮೈಸೂರಿನಲ್ಲಿ ಪ್ರಕಾಶಮಾನರಾಗಿದ್ದ ಮಹಾ ಸತ್ಪುರುಷರಾದ ಸಿದ್ಧಮಲ್ಹಾರರ ದರ್ಶನ ಮಾಡಿಕೊಂಡರು. ಮಹಾಸ್ವಾಮಿಗಳವರು. ಬರುವದಕ್ಕೂ ಆ ಸಿದ್ಧಮಲ್ಹಾರರು ತಮ್ಮ ಜನ್ಮ ಸಾರ್ಥಕವಾಗುವಂಥ ಮುಮುಕ್ಷುಮಾರ್ಗದ ಪ್ರಥಮ ಸೋಪಾನ ತೀರ್ಥ ಯಾತ್ರೆಗಾಗಿ ಹೊರಟಿದ್ದರು. ಅವರಿಬ್ಬರ ದರ್ಶನವಾದಾಕ್ಷಣವೇ ಬರೇ ಭಾಷಣದಿಂದ ಒಬ್ಬರಿಗೊಬ್ಬರು ಯೋಗ್ಯತೆಯನ್ನು ಕಂಡು ಹಿಡಿದರು. ಯಾಕಂದರೆ " ಸಮಾನಶೀಲಂ ವ್ಯಸನೇಷು ಸಖ್ಯಂ " ಎಂಬಂತೆ ಜಗತ್ತಿನಲ್ಲಿ ಜನ್ಮ ಧಾರಣ ಮಾಡಿದ ಮಹಾತ್ಮರಿಬ್ಬರಲ್ಲಿಯೂ ಜನ್ಮದ ಗುರಿಯು ಒಂದೇ ಇದ್ದುದರಿಂದ ಇಬ್ಬರಲ್ಲಿಯೂ ಗೆಳತನ ಕೂಡಿತು.

ವಾಚಕರೇ ಹಿಂದೆ ಪೀಠಿಕಾಪ್ರಕರಣದಲ್ಲಿ ಗಣಪತಿಗೆ ಶಿದ್ಧಮಲ್ಹಾರರ ಅವತಾರ ಮಾಡಲು ಶಿವನು ಆಜ್ಞಾಪಿಸಿದ್ದುದು ತಾವು ಮರೆತಿರಲಿಕ್ಕಿಲ್ಲ ಅದೇ ಮಹಾಪುರುಷರೇ ತಮ್ಮ ಸುಖಕ್ಕೆ ಬಂದ ಮಡಿವಾಳ ಸ್ವಾಮಿಯ ಚರಿತಾರ್ಥ ತಿಳಿದು ಅವರ ಗೆಳೆತನಕ್ಕೆ ಹಾತೊರೆದರು ಅವರಿಬ್ಬರು ಕೂಡಿ ಬಹುವಿಧವಾದ ತೀರ್ಥಕ್ಷೇತ್ರಗಳನ್ನು ನೋಡಿದರು. ಶಿದ್ಧಮಲ್ಹಾರರ ಸಖ್ಯವನ್ನು ಭೂಲೋಕದಲ್ಲಿ ಮಾಡಲಿಕ್ಕೆ ಸದ್ಬುದ್ಧಿಯನ್ನಿತ್ತ ಪರಶಿವನನ್ನು ಕೊಂಡಾಡಿದರು. ಮಹಾಸ್ವಾಮಿಯವರ ತಿಳುವಳಿಕೆಯಂತೆ ಶಿದ್ಧಮಲ್ಹಾರರು ಅತೀವ ಜ್ಞಾನಸಂಪನ್ನರು ಅನುಭವಸ್ಥರು ಇದ್ದರು. ಇವರ ಸಖ್ಯದಿಂದ ಮಹಾಸ್ವಾಮಿಯವರು ಆನಂದ ಭರಿತರಾದರು.

ವಾಚಕರೇ ದೇವರು ತಾನಾಗಿಯೇ ಅಮೃತವನ್ನು ಕೈನೀಡಿ ಕೊಡು ವಾಗ ಕುಡಿಯುಲಿಕ್ಕೆ ಯಾರು ಅಲ್ಲಗಳೆಯುವರು? ಆದರಿಂದ ಸತ್ಪುರಷರ ಸಮಾಗಮನಕ್ಕೆ ಮಹಾಸ್ವಾಮಿಯವರ ಹಾತೊರೆದದ್ದು ತಪ್ಪಲ್ಲ.

ಇಂಥ ಕಲ್ಪವೃಕ್ಷ ಸಮಾನರಾದ ಪುಣ್ಯವಂತ ಮಹಾತ್ಮಾ ಶಿದ್ಧಮಲ್ಹಾರ ಚರಿತಾರ್ಥವನ್ನು ಅವರ ಸಹನ ಶೀಲತೆಗಳನ್ನು ಕಂಡು ಮಡಿವಾಳಸ್ವಾಮಿಯವರು ಆನಂದ ಭರಿತರಾಗಿದ್ದರು. ಅವರ ಮನಸ್ಸು ಶಿದ್ಧಮಲ್ಹಾರರಲ್ಲಿ ನಟ್ಟಿತ್ತು. ಈ ರೀತಿ ತಮ್ಮ ಮನಿಸ್ಸಿನಿಂದ ಸಂತೋಷ ಭರಿತರಾಗಿ ಸಮ್ಮಿಲತರಾದ ಮಹಾನುಭಾವರಿಬ್ಬರಲ್ಲಿ ಒಂದು ತರಹದ ದೈವೀ ದೇಶೋದ್ಧಾರ ಕಾರ್ಯದ ಭಾವನೆ ಹುಟ್ಟಿತು. ಅವರಿಬ್ಬರೂ ಕೂಡಿ ಅನೇಕ ಪುಣ್ಯ ಕ್ಷೇತ್ರಗಳನ್ನು ತಿರುಗಿ ಕಡೆಗೆ ಬಾಣಾವಕ್ಕೆ ಬಂದು ಮುಟ್ಟಿದರು. ಪ್ರೇಮದಿಂದ ಭಾರತದಲ್ಲಿ ಅತಿಪವಿತ್ರ ಸ್ಥಾನವನ್ನು ಹೊಂದಲು ಕೂಡಿದ ಪುಣ್ಯವಾಹಿನಿಯರಾದ ಗಂಗೆ ಯಮುನೆಯರ ಸಂಗಮದಂತೆ ಪವಿತ್ರಹೃದಯದ ಮೂರ್ತಿವಂತ ಸಾಧು ಸಿರೋಮಣಿಗಳಿಬ್ಬರು ಕೂಡಿದ್ದರು. ಅವರಿಬ್ಬರೂ ಕೂಡಿ ಮೊದಲು-ವರ್ಣಿಸಿದ ಕುಂದರ ನಾಡಿನ ಕೈಲಾಸವಾದ ಸೊಗಲಪುರಕ್ಕೆ ಬಂದು ಅಲ್ಲಿ ಕೆಲದಿನ ಕಾಲ ಕಳೆದರು. ಅಲ್ಲಿಂದ ಅವರು ಸುತ್ತೊಮ್ಮೆ ಉತ್ತರಕ್ಕೆ ಪ್ರವಾಸ ಕೈಕೊಂಡಾಗ ಮಥುರೆಯಲ್ಲಿ ಬಂದು ತಮ್ಮ ಲೀಲೆಯನ್ನು ಬೀರಿ ಮುಂದಕ್ಕೆ ಸಾಗಿದರು.

ಮಾನವನು ಎಂಥ ಕಷ್ಟದಲ್ಲಿ ಇದ್ದರೂ ಕೂಡ ಅವನಿಗೆ ಸತ್ಸಂಗ ವಾಯಿತೆಂದರೆ ಅವನು-ಸುಖಿಯಾಗುವದರಲ್ಲಿ ಸಂದೇಹವಿಲ್ಲಾ.

ಶ್ರೀ ಚಿದಂಬರೇಶ್ವರ ದರ್ಶನ।
ಸಿದ್ಧ ಮಲ್ಹಾರನು ಆಗಲುತೆ ।
ಸಿದ್ಧ ಗಣದಧಿ ದೇವನನಿಸುವೆ ।
ಸಿದ್ಧ ಪುರುಷನ ಕಂಡನಾ ಚಿದಂಬರೇಶ್ವರನ ॥

ಶ್ರೀಗುರು ಮಡಿವಾಳೇಶ್ವರರು ಸಿದ್ಧ ಮಲ್ಹಾರರನ್ನು ಕೂಡಿಕೊಂಡು ಕೆಲದಿನ ಕಾಲಕಳೆಯುಲಾರಂಭಿಸಿದರು. ಅವರು ಪ್ರತಿನಿತ್ಯ ಮಾಡುವ

ವೇದಾಂತ ವಿಷಯಕ ಚರ್ಚೆಯಿಂದ ಸದಾವಕಾಲದಲ್ಲಿಯೂ ಆನಂದ ದಲ್ಲಿಯೇ ಕಾಲಕಳೆಯುತ್ತಿದ್ದರು. ಮಹಾಸ್ವಾಮಿಯವರು ಒಮ್ಮೊಮ್ಮೆ ಬಾಣಾವರಕ್ಕೆ ಹೋಗುತ್ತಿದ್ದರು. ಕೆಲಕಾಲ ಮಥುರೆಯಲ್ಲಿ ಕಳೆದು ಅನಂತರ ಸಿದ್ಧನ ಗವಿಯಲ್ಲಿ ಕಾಲ ಕಳಿಯಲಾರಂಭಿಸಿದರು.

ನೋಡಿ ವಾಚಕರೇ ಮಹಾತ್ಮರು ಎಲ್ಲಿ ವಾಸಿಸಿದರೇನು? ಎಲ್ಲವೂ ಒಂದೆ. ಅದಕ್ಕಂತೆಯೇ ಯೋಗಿಗೆ ಯಾವ ಭಯವೂ ಇಲ್ಲವೆಂದು ಹೇಳಿದ್ದಾರೆ.

ಧೈರ್ಯಂ ಯಶ್ಯ ಪಿತಾ ಕ್ಷಮಾಚ ಜನನೀಂ
ಶಾಂತಿಃ ಸ್ಥಿರಂ ಗೇಹಿನೀಂ ಸತ್ಯಾ ಸುಕುವರಂ
ದಯಾಚ ಭಗಿನಿಸ್ತಥಾ ಮನಸ್ಯ್ಯಮಾ
ಶೈಯ್ಯಾ ಭೂಮಿ ತಲಂ ದಿಶೋಽಪಿವಸನಂ
ಜ್ಞಾನಾಽಮೃತಂ ಭೋಜನಂ ಯೇತೇ
ಯಸ್ಯ ಕುಸುಂಬಿನೋ ವದಸಖೆ
ಕಸ್ಯಾತ ಭಯಂ ಯೋಗಿನಾ ||

ಎಂಬಂತೆ ಮಹಾಸ್ವಾಮಿಯವರು ಯಾವ ಭಯವೂ ಇಲ್ಲದೆ ಸಿದ್ಧನ ಗವಿಯಲ್ಲಿ ವಾಸ ಮಾಡಲಾರಂಭಿಸಿದರು. ಹೀಗಿರುವಾಗ ಮಥುರೆಯಲ್ಲಿ ಒಮ್ಮೆ ಸದ್ಭಕ್ತ ಮಂಡಳಿಯು ಕೂಡಿತ್ತು. ಅಲ್ಲಿ ಕೂಡಿದ ಮಹಾಜನರಲ್ಲಿ ಕೆಲವರು ಜ್ಞಾನವಲ್ಲಿ (ಗಾಂಜಿಯ) ಭಕ್ತರಿದ್ದರು ಅವರು ಗಾಂಜಿಯನ್ನು ಸೇದುತ್ತ ಪರಮಾನಂದದಿಂದ ಕಾಲಕಳೆಯುತ್ತಿದ್ದರು. ಆಗ ಸ್ವಾಮಿಯ ವರು ಸಾವಕಾಶವಾಗಿ ಅವರ ಗುಂಪಿನಲ್ಲಿ ಸೇರಿ ತಮ್ಮ ಹತ್ತರ ಇದ್ದ ದೊಡ್ಡ ಚಿಲಿಮೆಯಲ್ಲಿ ಗಾಂಜಿಯನ್ನು ಹದ ಮಾಡಿ ಹಾಕಿ ಅದರ ಮೇಲೆ ಒಂದು ಸುಣ್ಣದ ಬುರ್ಲಿಯ ಕಲ್ಲನ್ನು ಏರಿಸಿ ಅದನ್ನು ಸೇದಲು ಕಲ್ಲು ಹೊತ್ತಿ ಉರಿ ಯಾಯಿತು. ಅದನ್ನು ನೋಡಿ ಆ ಭಕ್ತಮಂಡಳಿಯು ಸ್ವಾಮಿಯವರಿಗೆ ಸಾಷ್ಟಾಂಗಪ್ರಣಾಮ ಮಾಡಲು ಮಹಾಸ್ವಾಮಿಯವರು ಅವರಿಗೆ ಸದುಪದೇಶ ಮಾಡಿದರು. ಸದ್ಭಕ್ತರೇ ನೀವು ದೇವರಲ್ಲಿ ಭಕ್ತಿಯನ್ನಿಟ್ಟು ನಡಿದರೆ ನಿಮಗೆ ಮುಕ್ತಿಯಾಗುವದು ಸತ್ಯ ಆದರೆ ಈ ಜ್ಞಾನವಲ್ಲಿಯನ್ನು ಸೇದಿ ಇದರ ಅಮ ಲಿನಲ್ಲಿ ದೇವರನು ಮರೆಯಬೇಡಿರಿ. ನೀವು ಈ ಅಮಲು ಪದಾರ್ಥದ

ವಿವಿಧೋದ್ದೇಶವನ್ನು ಸದ್ಗುರುವಿನ ಸದುದ್ದೇಶದ ನಾಮ ಸಂಕೀರ್ತನೆಯಲ್ಲಿ ಮರೆಯಲು ಮಾತ್ರ ಸೇದಿರಿ ಎಂದು ಹೇಳಿ ಅಲ್ಲಿಂದ ಸೊಗಲಕ್ಕೆ ಮರಳಿದರು.

ಮಹಾತ್ಮರು ಯಾವಾಗಲೂ ಏಕಾಂತವಾಸವನ್ನೇ ಬಯಸುವವರು ಏಕೆ ? ಭವಭಂದನವನ್ನು ಹರಿದೊಗೆದು ಭವದುಃಖಕ್ಕೀಡಾದ ಭವದುಃಖಿಗಳನ್ನು ನೋಡಿ ಭವಸಾಗರದ ಮಾಯೆಯಲ್ಲಿ ಸಿಲುಕಬಹುದೆಂಬ ಭಯದಿಂದಲೂ ತಮ್ಮ ಆತ್ಮದ ಬಲಕ್ಕಾಗಿ ಶಿವಧ್ಯಾನ ಮಾಡುವಾಗ ತಮಗೆ ಯಾವ ತೊಂದರೆಯಾಗಬಾರದೆಂದು ಏಕಾಂತವಾಸ ಬಯಸುವ ಈ ರೀತಿ ಶ್ರೀ ಮಡಿವಾಳೇಶ್ವರರು ತಮ್ಮ ಆತ್ಮತೇಜೋ ಬಲದಿಂದ ತಾವು ಅರಣ್ಯದಲ್ಲಿ ಇದ್ದರೂ ಜಗತ್ತನ್ನು ಬೆಳಗಲಾರಂಭಿಸಿದರು. ಭೂದಿ ಮುಚ್ಚಿದ್ದರೂ ಕೆಂಡವು ಊದಿದಾಕ್ಷಣವೇ ಪ್ರಕಾಶಿಸುವಂತೆ ತಾವು ಗವಿಯಲ್ಲಿ ಇದ್ದರೂ ಅವರ ಯೋಗಪ್ರಭಾವವು ಸುತ್ತಲಿನ ಜನರನ್ನು ತನ್ನ ಕಡೆಗೆ ಎಳೆದುಕೊಳ್ಳದೆ ಬಿಡಲಿಲ್ಲಾ ಜನರು ಅವರನ್ನು ಕಾಣಲು ಸಿದ್ಧನ ಗವಿಗೆ ಹೋಗುತ್ತಿದ್ದರು. ಹೀಗಿರುವಾಗ ಶ್ರೀ ಮಡಿವಾಳ ಸ್ವಾಮಿಯವರ ಮನಸ್ಸಿನಲ್ಲಿ ಚಿದಂಬರ ದೀಕ್ಷಿತರನ್ನು ಕಾಣಬೇಕೆಂಬ ಇಚ್ಛೆ ಹುಟ್ಟಿತು. ಆಗ ಸ್ವಾಮಿಯವರು ಸೊಗಲದಿಂದ ಮುರಗೋಡಿಗೆ ಹೊರಟರು.

ವಾಚಕರೇ ಚಿದಂಬರ ದೀಕ್ಷಿತರ ಹೆಸರು ತೆಗೆದುಕೊಂಡ ಕೂಡಲೇ ತಮಗೆ ದಿಗಿಲು ಬಿದ್ದಂತೆ ಕಂಡುಬರುತ್ತದೆ. ಕಾರಣ ತಮಗೆ ಒಂದನೇ ಪ್ರಕರಣದ ಪ್ರಭುವರನಿಗೆ ವರ ಕೊಡಲು ಕೂಡಿದ ಕೈಲಾಸದ ಶಂಕರನ ಸಭೆಯಲ್ಲಿ ವಿರೇಶನಿಗೆ ಸಾಂಬನು ಕೊಟ್ಟ ವಚನದ ನೆನಪು ಇರಬಹುದಲ್ಲವೇ? ಅದೇ ಸಾಂಬ ಅವತಾರ ಸಂಭೂತರು "ಚಿದಂಬರ" ದೀಕ್ಷಿತರೆಂಬ ಹೆಸರಿನಿಂದ ಬೆಳಗಾಂವಿ ಜಿಲ್ಲೆಯ ಮುರಗೋಡ ಮಲ್ಹಾರ ದೀಕ್ಷಿತರ ಉದರಲ್ಲಿ ಜನಿಸಿದ ಪರಮ ಪ್ರಖ್ಯಾತ ಮೂರ್ತಿಯೇ ನಮ್ಮ ಕಥಾನಾಯಕ ಮಡಿವಾಳಸ್ವಾಮಿಯವರ ಪೂಜ್ಯವಸ್ತುವಾದ ಚಿದಂಬರ ದೀಕ್ಷಿತರು. ಈ ಮಹಾ ಸತ್‌ಪುರುಷರು ತಮ್ಮ ಯೋಗ ಪ್ರಭಾವದಿಂದ ಜಗತ್ತಿನ ಜನರಲ್ಲಿ ಸ್ವಾಮಿತ್ವವನ್ನು ಬೀರಿ ಅತಿ ಪೂಜ್ಯವ್ಯಕ್ತಿಗಳು ಎನಿಸಿದರು. ನೋಡಿ ಮಹಾಶಯರೇ ಸೂಜಿಗಲ್ಲು ಸೂಜಿಯನ್ನು ಎಳಿಯುವಂತೆ ಕರ್ತತ್ವಶಾಲಿಗಳು ಎನಿಸಿದಂತೆ ಮಹಾಸ್ವಾಮಿಯವರ ಪುಣ್ಯ ಪ್ರಭಾವಶಾಲಿಯಾದ ದಿವ್ಯ ಮನಸನ್ನು ಚಿದಂಬರ ದೀಕ್ಷಿತರು

ಎಳೆದುಕೊಂಡರು. ಬಂಗಾರವು ಎಲ್ಲಿ ಇದ್ದರೆ ಏನು ಅದು ತನ್ನ ತೇಜವನ್ನು ತೋರದೆ ಎಂದೂ ಬಿಡುವದಿಲ್ಲ ಅದರಂತೆ ಮಡಿವಾಳ ಸ್ವಾಮಿಯುವರು ಕೂಡಾ ದೀಕ್ಷಿತರ ದರ್ಶನಕ್ಕಾಗಿ ಹಾತೊರೆದರು. ಸೊಗಲದಿಂದ ಹೊರಟ ಮಹಾ ಸ್ವಾಮಿಯುವರು ಮುರಗೋಡಿಗೆ ಬಂದು ಮುಟ್ಟಿದರು. ನಾವಾದರೂ ಮಹಾ ಸ್ವಾಮಿಯುವರ ಸಂಗಡ ಹೋಗೋಣ ಜ್ಞಾನ ಭೋದ ಪರ ಗುರುವಾದ ಚಿದಂಬರ ದೀಕ್ಷಿತರು ಪ್ರತಿನಿತ್ಯದಂತೆ ಮಡಿವಾಳ ಸ್ವಾಮಿಯುವರು ಅಲ್ಲಿಗೆ ತಲುಪಿದಾಗ ತಮ್ಮ ಸದ್ಭಕ್ತ ಮಂಡಳಿಗೆ ಜ್ಞಾನಭೋದ ಮಾಡುತ್ತ ಕುಳಿತಿದ್ದರು. ಆಗ ದಿಗಂಬರ ರೂಪದಿಂದ ಬರುತ್ತಿರುವ ಮಡಿವಾಳ ಸ್ವಾಮಿಯುವರನ್ನು ಕಂಡರು.

ವರದಿಗಂಬರ ರೂಪ ಕಾಣುತೆ ಪರವು
ಪರಶಿವ ನೆದ್ದನಾಗಳೆ
ಕರುಣಿಸಲು ತನ್ನ ಕುವರನ ಸಿತ್ಯ ಭವವಿಜಯು

ಶ್ರೀಗುರು ಮಡಿವಾಳ ಸ್ವಾಮಿಯುವರು ಚಿದಂಬರ ದೀಕ್ಷಿತ ಭವ್ಯ ಮೂರ್ತಿಯು ಆಸನದಲ್ಲಿ ಮಂಡಿತವಾಗಿದ್ದನ್ನು ನೋಡಿ ಪರಶಿವನನ್ನು ಕೈಲಾಸದಲ್ಲಿ ಕಂಡಷ್ಟು ಭಕ್ತಿಯಿಂದ ದೂರದಿಂದಲೇ ದೀಕ್ಷಿತರಿಗೆ ಸಾಷ್ಟಾಂಗ ಪ್ರಣಾಮುವನ್ನು ಹಾಕಿದರು. ಆಗ ಚಿದಂಬರ ದೀಕ್ಷಿತರು ಕುಳಿತ ಆಸನದಿಂದ ಎದ್ದು ಆನಂದಭಾಷ್ಪಗಳನ್ನು ಸುರಿಸುತ್ತ ಧಾವಿಸಿ ಮಡಿವಾಳ ಸ್ವಾಮಿಯುವರ ಇದ್ದೆಡೆಗೆ ಬಂದು ಗಟ್ಟಿಯಾಗಿ ಅಪ್ಪಿಕೊಂಡರು. ಆಗ ಅವರು ಇಷ್ಟದಲ್ಲಿ ಆದ ಭಾವನೆಯು ವರ್ಣನೆಯು ವರ್ಣಿಸಲು ಅಸಾಧ್ಯವು ಏಕೆ ಎಂದು ನಮ್ಮ ವಾಚಕರು ಕೇಳಬಹುದು ಅವರಿಬ್ಬರಿಗೂ ತಾವು ಯಾರು ಎಂಬ ಭಾವನೆಯು ಇಬ್ಬರ ಕಣ್ಣುಗಳಿಂದ ಆನಂದ ಬಾಷ್ಪಗಳು ಸುರಿಯುಲಾರಂಭಿಸಿದವು ಕೆಲವು ಹೊತ್ತಿನ ಮೇಲೆ ದೀಕ್ಷಿತರು ಸ್ವಾಮಿಯುವರನ್ನು ಕೈಹಿಡಿದು ಕರಿದುಕೊಂಡು ಬಂದು ಈರ್ವರೂ ಏಕಾಂತ ಸ್ಥಾನಕ್ಕೆ ಹೋದರು. ಅವರು ಏಕಾಂತ ಸ್ಥಾನದಲ್ಲಿಯೇ ಮಾತನಾಡಿದರು. ಗುಪ್ತವಾಗಿಯೇ ಉಳಿಯುಲಿ ಅಲ್ಲಿ ಕುಳಿತ ಜನರು ನಡೆದ ಸಂಗತಿಯುನ್ನು ದಿಗ್ಮೂಢರಾಗಿ ಕುಳಿತು (ಆನಂದ)

ಆಶ್ಚರ್ಯಗಳಿಂದ ನೋಡಲಿಕ್ಕೆ ಹತ್ತಿದ್ದರು. ಆಶ್ಚರ್ಯಚಕಿತರಾಗದೇನು ಮಾಡ್ಯಾರು ಮಹಾತ್ಮರು ತಮ್ಮ ಲೀಲೆಯುನ್ನು ಭವದ ಜನರಿಗೆ ತಿಳಿಯು ಗೊಟ್ಟಾರೆ? ಲೀಲಾಮಾತ್ರದಿಂದ ವಿಶ್ವನಿರ್ಮಾಣ ಮಾಡುವ ಶಕ್ತಿವಂತರ ಅಗಾಧ ಲೀಲೆಯು ಪಾಮರರಿಗೆ ತಿಳಿಯುವದು ಹೇಗೆ ತಾನೇ ಸಾಧ್ಯ ಆದರಂತೆ ಅಲ್ಲಿಯ ಜನರಿಗೆ ಏನೂ ತಿಳಿಯಲಿಲ್ಲಾ ಅವರೀರ್ವರು ಕೋಣೆಯೊಳಗಿಂದ ಹೊರಬಿದ್ದು ಬಂದು ಚಿದಂಬರ ದೀಕ್ಷಿತರು ಮಡಿವಾಳ ಸ್ವಾಮಿಯವರನ್ನು ತಮ್ಮ ಆಸನದ ಮೇಲೆ ಕೂಡ್ರಿಸಿದರು. ಮುಂದೆ ದೀಕ್ಷಿತರು ತಮ್ಮ ಉಪನ್ಯಾಸವನ್ನು ಮುಗಿಸಿದರು. ಆ ಮೇಲೆ ಉಪನ್ಯಾಸವನ್ನು ಕೇಳಲಿಕ್ಕೆ ಬಂದ ಪಂಡಿತರು ಮಹಾ ಸ್ವಾಮಿಯವರನ್ನು ಗೀರ್ವಾಣ ಭಾಷೆಯಲ್ಲಿ ಯಾರೆಂಬ ಪ್ರಶ್ನೆಯನ್ನು ಕೇಳಲಾಗಿ ಅತಿ ಗಂಭೀರ ವಾಣಿಯಿಂದ ಅದೇ ಭಾಷೆಯಲ್ಲಿ ಅವರಿಗೆ ಉತ್ತರ ಕೊಟ್ಟರು. ಸ್ವಾಮಿಯವರ ಧೀರಗಂಭೀರ ವಾಣಿಯನ್ನು ಕೇಳಿ ಪಂಡಿತರು ಆಶ್ಚರ್ಯಚಕಿತರಾದರು. ಮರುದಿನಾ ಮಹಾ ಸ್ವಾಮಿಯವರೇ ಉಪನ್ಯಾಸವನ್ನು ಹೇಳಲಿಕ್ಕೆ ಆರಂಭಿಸಿದರು. ಅವರ ವಾಕ್‌ಚಾತುರ್ಯವನ್ನು ಗೀರ್ವಾಣಭಾಷೆಯ ಚಮತ್ಕೃತ ಕಥೆಯನ್ನು ಕಂಡು ಪಂಡಿತರು ಬೆರಗಾದರು. ಮುಂದೆ ಕೆಲದಿನ ಮಹಾಸ್ವಾಮಿಯವರು ಅಲ್ಲಿಯೇ ದೀಕ್ಷಿತರ ಸಂಗಡ ಕಾಲಕಳೆದರು. ಅವರು ಅಲ್ಲಿ ಇರುವಾಗ ಅತಿ-ಚಮತ್ಕಾರವಾದ ಒಂದು ಘಟನೆ ಸಂಭವಿಸಿತು. ಆಗಿನ ಕಾಲದಲ್ಲಿ ಚಿದಂಬರ ದೀಕ್ಷಿತರು ವಾಸವಾಗಿದ್ದ ಮುರಗೋಡ ನರಗುಂದ ಸಂಸ್ಥಾನದ ಅಧಿಪತ್ಯಕ್ಕೆ ಒಳಪಟ್ಟಿತ್ತು ಯಜ್ಞಪ್ರೀತಿ ದೀಕ್ಷಿತರು ಮೇಲಿಂದ ಮೇಲೆ ಯಜ್ಞ ಮಾಡುತ್ತಿದ್ದರು ಒಮ್ಮೆ ರಥೋತ್ಸವದ ಕಾಲಕ್ಕೆ ಜನರಿಗೆ ಸ್ವಲ್ಪ ಕಠಿಣವೆನಿಸಿದರೂ ಸ್ವಾಮಿಯವರು ದೀಕ್ಷಿತರ ಜೇಷ್ಠಪುತ್ರರಾದ ಅದ್ಭುತ್ ಶಾಪಗ್ರಸ್ಥ ಶಕ್ತಿಯುಳ್ಳ ಬಾಪು ದೀಕ್ಷಿತರನ್ನು ಬಾಪಾ ಎಂದು ಕರೆಯುವದರ ಮೇಲಿಂದಲೇ ಇವರು ಮಹಾತ್ಮರೆಂದು ಜನರು ತರ್ಕಿಸಿದ್ದರು.

ನೋಡಿ ವಾಚಕರೇ ಕಬ್ಬು ಗಾಣಕ್ಕೆ ಹಚ್ಚಿದಂತೆ ರುಚಿಯಾಗುವ ಹಾಗೆ ಮಹಾಸ್ವಾಮಿಯವರು ಅನೇಕ ಪವಾಡಗಳನ್ನು ತೋರಿಸುತ್ತ ತಮ್ಮ ಯೋಗ ಸಾಮರ್ಥ್ಯವನ್ನು ಜಗತ್ತಿಗೆ ತೋರಿಸುತ್ತ ಲೀಲೆಯನ್ನು ತೋರಿಸ ಲಾರಂಭಿಸಿದರು.

ಮಹಾಸ್ವಾಮಿಯವರು ಮುರಗೋಡದಲ್ಲಿ ಇದ್ದಾಗ್ಯೆ ಮುರಗೋಡ ಶೆಟ್ಟರ ಮನೆಯಲ್ಲಿ ಗಣಾರಾಧನೆಯು ನಡೆದಿತ್ತು ಆಗ ಆ ಶೆಟ್ಟರ ಮನಸ್ಸಿನಲ್ಲಿ ಮಡಿವಾಳಸ್ವಾಮಿಯವರನ್ನು ಕರೆಯಬಾರದೆಂಬ ದುರ್ಬುದ್ಧಿ ಹುಟ್ಟಿತು. ಅದು ಏಕೆ ಮಹಾಸ್ವಾಮಿಯವರು ನಿರ್ಲಿಪ್ತರೆಂಬದು ಜಗತ್ತಿಗೆ ತಿಳಿಯಬೇಕಾಗಿತ್ತು ಮತ್ತು ಶೆಟ್ಟರ ಶ್ರೀಮಂತಿಕೆಯು ಸಾಧುಗಳ ಸಾಧುತ್ವದ ಮುಂದೆ ಕಃಪದಾರ್ಥವೆಂದು ಜಗತ್ತಿಗೆ ತಿಳಿಯಬೇಕಾಗಿತ್ತು. ಅದಕ್ಕಾಗಿಯೇ ಶೆಟ್ಟರ ಮನಸ್ಸಿನಲ್ಲಿ ಸ್ವಾಮಿಯವರನ್ನು ಕರೆಯಬಾರದೆಂಬ ದುರ್ಬುದ್ಧಿ ಹುಟ್ಟಿದ್ದು ಗಣಾರಾಧನೆಯ ಸಲುವಾಗಿ ಆಮಂತ್ರಿಸಿದ ಜನರೆಲ್ಲ ಕೂಡಿದ್ದರು. ಗಣಾರಾಧನೆಯು ಸಾಂಗವಾಯಿತು. ಸಕಲರೂ ಲಿಂಗಪೂಜೆಗಾಗಿ ಕುಳಿತರು. ಎಲ್ಲರೂ ತಮ್ಮ ವಸ್ತ್ರಗಳನ್ನು ಬಿಚ್ಚಿನೋಡುತ್ತಾರೆ ಅಲ್ಲೇನಿದೆ ಒಬ್ಬರ ವಸ್ತ್ರದಲ್ಲಿಯೂ ಲಿಂಗಗಳಿಲ್ಲಾ ಅದನ್ನು ಕಂಡು ಎಲ್ಲರೂ ಆಶ್ಚರ್ಯಚಕಿತರಾದರು ಮತ್ತು ಘಾಬರಿಯಾದರು.

ನೋಡಿ ವಾಚಕರೇ ಜಗತ್ತನ್ನೇ ತನ್ನ ಕುಕ್ಷಿಯಲ್ಲಿ ಇಟ್ಟು ರಕ್ಷಿಸುವ ಪರಮಾತ್ಮನೇ ಲಿಂಗರೂಪಿಯು ಸಾಕ್ಷಾತ್ ಪರಶಿವನನ್ನೇ ಬಿಟ್ಟು ಜಂಗಮ್ಮರಿಗೆ ಲಿಂಗವೆಲ್ಲಿಂದ ಬರಬೇಕು? ಶಿವನನ್ನು ತಿರಸ್ಕರಿಸಿ ಲಿಂಗಪೂಜೆ ಮಾಡಬೇಕೆಂದರೆ ಸಾಧ್ಯವಾದೀತೆ.

ಮೇಲೆ ಹೇಳಿದಂತೆ ದಿಗ್ಮೂಢರಾದ ಜಂಗಮರು ಪಶ್ಚಾತ್ತಾಪಕ್ಕೆ ಗುರಿಯಾದರು. ಆಗ ಅವರಲ್ಲಿ ಯಾವನೊಬ್ಬನು ಶೆಟ್ಟರನ್ನು ಕರೆದು ಶೆಟ್ಟರೇ ನಾವು ಮಡಿವಾಳಸ್ವಾಮಿಯವರನ್ನು ತಿರಸ್ಕರಿಸಿದ್ದರ ಪರಿಣಾಮವೇ ಇದು ಎಂದು ಹೇಳಲಾಗಿ ಶೆಟ್ಟರು ಮಡಿವಾಳಸ್ವಾಮಿಯವರ ಬಳಿಗೆ ಹೋಗಿ ಅವರಿಗೆ ಸಮಸ್ತ ಜಂಗಮ ಸಹಿತ ಸಾಷ್ಟಾಂಗ ನಮಸ್ಕಾರ ಮಾಡಲಾಗಿ ಕರುಣಾಸಮುದ್ರರಾದ ಸ್ವಾಮಿಯವರು ಶೆಟ್ಟರನ್ನು ಕ್ಷಮಿಸಿ ಏಕೆ ಬಂದೀಯಪ್ಪ ಎಂದು ಕೇಳಲಾಗಿ ನಡೆದ ವರ್ತಮಾನವನ್ನು ಶೆಟ್ಟರು ಹೇಳಿ ಜಂಗಮರು ಉಪವಾಸ ಸಾಯುತ್ತಾರೆ ರಕ್ಷಿಸಬೇಕೆಂದು ಬೇಡಿಕೊಂಡರು ಆಗ ಸ್ವಾಮಿ ಲೀಲೆಯಿಂದ ಶೆಟ್ಟರೇ ನನ್ನ ಆಸನದ ಕೆಳಗೆ ವತ್ತಲಿಕ್ಕೆ ಹತ್ತಿದೆ ನೋಡಿ ಎಂದು ಹೇಳಿ ಲಿಂಗದ ಪೆಂಟಿಯನ್ನೇ ತೆಗೆದು ಒಂದೊಂದಾಗಿ ಜಂಗಮರಿಗೆ ಕೊಟ್ಟು ಉದ್ಧರಿಸಿದರು ನಂತರ ಗಣಾರಾಧನೆಯು ಯಥಾಸಾಂಗವಾಗಿ ಸಾಗಿತು

ಕಾರಣ ಮಹಾತ್ಮರ ನಿಂದೆಯನ್ನು ಮಾಡಬಾರದು ಸಕಲರ ಮನೋಗತವನ್ನು ತಿಳಿದು ಸರ್ವಾಂತರ್ಯಾಮಿಯೆನಿಸಿದ ಪರಶಿವನ ಮಹಿಮೆಯು ಪಾಮರರಿಗೆ ತಿಳಿಯುವದೆ? ಎಂದೂ ಶಕ್ಯವಿಲ್ಲಾ ಅದಕ್ಕಂತೆಯೇ.

## ಕವಿರತ್ನ ಕಾಳಿದಾಸನು

ಸ್ವದೇಶೇ ಪೂಜ್ಯತೆ ರಾಜ್ಯ ವಿದ್ವಾನ್ ಸರ್ವತ್ರ ಪೂಜ್ಯತೆ ।

ಎಂದು ಹೇಳಿದ್ದಾರೆ ಬರೆ ಒಂದು ವಿದ್ಯೆಯಿಂದ ಸ್ವಾಮಿಯವರು ಜಗತ್ತಿನಲ್ಲಿ ಶ್ರೇಷ್ಠ ಪುರುಷರೆನಿಸಿದರು. ಸಕಲ ವಿದ್ಯಾಭಾಂಡಾರವೇ ಆತನಿಂದ ಉದಯಿಸಿದಾಗ ವಿದ್ಯೆಯಲ್ಲಿ ಕೀರ್ತಿಶ್ಯಾಲಿಯಾಗುವದರಲ್ಲಿ ಏನಾಶ್ಚರ್ಯ?

ಗುರುಗಳ ಆಜ್ಞೆ ಇಲ್ಲದಲೇ ತನ್ನ ಅಧಿಕಾರದ ಗರ್ವದಿಂದ ದೀಕ್ಷಿತರನ್ನು ಗಣಿಸದೆ ನರಗುಂದ ಸಂಸ್ಥಾನಿಕನಾದ ಬಾಬಾಸಾಹೇಬನು ತೇರು ಜಗ್ಗಿಸಿದನು. ಸ್ವಲ್ಪ ದೂರ ತೇರು ಹೋದಾಗ ದೇವರ ನಂದಾದೀವಿಗೆ ದೀಪಗಳು ತಾವಾಗಿಯೇ ಶಾಂತವಾದದ್ದನ್ನು ಬಾಬಾಸಾಹೇಬನು ಕಣ್ಮುಟ್ಟ ನೋಡಿದನು ಆಗ ತನ್ನ ಅಧಿಕಾರದ ಗರ್ವದ ಪ್ರಾಯಶ್ಚಿತವು ತನಗಾಗದೆ ಹೋಗುವದಿಲ್ಲೆಂದು ಮನಗಂಡು ಬಾಬಾಸಾಹೇಬನು ಗುರುಗಳಲ್ಲಿ ಕ್ಷಮೆ ಬೇಡಿ ನಡೆದ ಸಂಗತಿಯನ್ನು ತಿಳಿಸಿದರು. ಆಗ ಗುರುಗಳು ಬಾಬಾ ಅದಕ್ಕೆ ನಾನು ಏನು ಮಾಡುವದು ನಿನ್ನ ಸಂಸ್ಥಾನದ ಅಳಿಗಾಲವೇ ಬಂದಾಗ್ಗೆ ದೇವರು ನಿನಗೆ ಆ ದುರ್ಬುದ್ಧಿಯನ್ನು ಹುಟ್ಟಿಸಿದನು ಆದರೂ ಈ ಮಹಾತ್ಮನಿಂದ ನಿನ್ನ ಸಂಸ್ಥಾನವು ಉಳಿಯಬೇಕಲ್ಲದೆ ಅನ್ಯರಿಂದ ಸಾಧ್ಯವಿಲ್ಲ ಎಂದು ಮಡಿವಾಳ ಸ್ವಾಮಿಯವರನ್ನು ತೋರಿಸಿದರು. ಅವರು ಕಾಲೋಚಿತದಲ್ಲಿ ನಿನಗೆ ದರ್ಶನವಿತ್ತು ಹೇಳುವರು. ಎಂದು ಬಾಬಾಸಾಹೇಬನನ್ನು ಸಂತೈಸಿ ಕಳುಹಿಸಿದರು.

ಮುಂದೆ ಕೆಲ ದಿನಗಳ ಮೇಲೆ ದೀಕ್ಷಿತರು ಯಜ್ಞಕ್ಕೆ ಎಂದು ಕೊಣ್ಣೂರಕ್ಕೆ ಬಂದರು. ಆ ಯಜ್ಞಕ್ಕೆಂದು ದೊಡ್ಡ ದೊಡ್ಡ ಸಂಸ್ಥಾನಿಕರಿಗೂ ದೇಸಾಯಿ ದೇಶಪಾಂಡೆಯರಿಗೂ ಆಮಂತ್ರಣವಿತ್ತಿದ್ದರು. ಆ ಯಜ್ಞದಲ್ಲಿ ಸಕಲ ಕೆಲಸಗಳನ್ನು ಒಬ್ಬೊಬ್ಬರಿಗೆ ನಿಯಿಮಿಸಿಕೊಟ್ಟರು. ಆದರೆ ಕೋಲಿ ಕೆಲಸಕ್ಕೆ ಮಾತ್ರ ಮಡಿವಾಳ ಸ್ವಾಮಿಯವರನ್ನು ನಿಯಮಿಸಿದ್ದರು. ಯಜ್ಞವು ಯಥಾಸಾಂಗವಾಗಿ ಸಾಗಿತು. ಹೀಗಿರುವಾಗ ಒಂದು ದಿವಸ ಎಲ್ಲರು

ಭೋಜನಕ್ಕೆ ಕುಳಿತಾಗ ತುಪ್ಪ ಕಡಿಮೆಯಾಯಿತು. ಆಗ ದೀಕ್ಷಿತರು ತುಪ್ಪ ತರುವ ಕೆಲಸವು ಮಡಿವಾಳನಿಂದ ಅಲ್ಲದೆ ಅನ್ಯರಿಂದ ಸಾಧ್ಯವಿಲ್ಲೆಂದು ಮಡಿವಾಳ ಸ್ವಾಮಿಯವರನ್ನು ಕರೆದು ಮಡಿವಾಳಾ ಗಂಗೆಯಲ್ಲಿ ಹೋಗಿ ತುಪ್ಪ ಕಡಾ ತಗೆದುಕೊಂಡು ಬಾ ಎಂದು ಹೇಳಲು ಗಟ್ಟಿಗರಾದ ಹತ್ತೆಂಟು ಶಿಷ್ಯರನ್ನು ಕರಕೊಂಡು ಮಡಿವಾಳ ಸ್ವಾಮಿಯವರು ಮಲಾಪಹಾರಿ ನದಿಗೆ ಹೋಗಿ ನೀರಿನಲ್ಲಿ ಕೊಡವನ್ನು ತುಂಬಲು ಅದು ತುಪ್ಪವಾಗಿ ಪರಿಣಮಿಸಿತು. ಅದನ್ನೇ ತಂದು ಜನರ ಊಟಕ್ಕೆ ಬಡಿಸಿದರು. ಯಜ್ಞ ಮುಗಿದ ನಂತರ ಕಡ ತಂದ ತುಪ್ಪವನ್ನು ಮಲಾಪಹಾರಿಯಲ್ಲಿ ಸುರುವಲು ಅದು ನೀರಿನ ಕೂಡ ನೀರಾಗಿ ಹೋಯಿತು.

ಮಡಿವಾಳ ಸ್ವಾಮಿಯವರು ಚಿದಂಬರೇಶ್ವರರಲ್ಲಿ ಇರುವಾಗ ಉತ್ತರ ದೇಶದಿಂದ ಇಬ್ಬರು ಪಂಡಿತರು ದಿಗ್ವಿಜಯಾರ್ಥವಾಗಿ ಚಿದಂಬರ ದೀಕ್ಷಿತರಿದ್ದೆಡೆಗೆ ಬಂದರು. ಸರ್ವಾಂತರ್ಯಾಮಿಗಳಾದ ದೀಕ್ಷಿತರು ಅದನ್ನು ತಿಳಿದು ಮಡಿವಾಳ ಸ್ವಾಮಿಯವರನ್ನು ಕರೆದು ಮಡಿವಾಳಾ ಸಿದ್ಧನ ಗವಿಯಲ್ಲಿ ಬಂದ ಪಂಡಿತರನ್ನು ಉಪಾಯದಿಂದ ಗೆದ್ದು ಅವರನ್ನು ಕರೆದುಕೊಂಡು ಬಾ ಎಂದು ಹೇಳಿ ಕಳುಹಿಸಿದರು. ಮಡಿವಾಳ ಸ್ವಾಮಿಯವರು ಸಿದ್ಧನ ಗವಿಗೆ ಹೋಗಿ ಆ ಪಂಡಿತರ ದರ್ಶನ ತೆಗೆದುಕೊಂಡು ಅವರನ್ನು ಏತಕ್ಕಾಗಿ ಬಂದಿರುವಿರೆಂದು ಕೇಳಿದರು. ಅದಕ್ಕೆ ಅವರು ನಾವು ಪೂರ್ವಪಕ್ಷವಾಗಿ ಮಂಡಿಸಿದ ವಿಷಯವನ್ನು ಸಿದ್ಧಾಂತ ವಿಷಯದಿಂದ ತರ್ಕಿಸಿ ಅದನ್ನು ಸುಳ್ಳು ಮಾಡುವೆವು. ಎಂದು ಹೇಳಿದರು. ಅದಕ್ಕೆ ಮಹಾಸ್ವಾಮಿಯವರು ಅವರಿಗೆ ನಾನು ಒಂದು ಪೂರ್ವ ಪಕ್ಷವನ್ನು ಹೇಳುತ್ತೇನೆ ಅದನ್ನು ಸುಳ್ಳು ಮಾಡಬಲ್ಲಿರಾ ಎಂದು ಪ್ರಶ್ನಿಸಿದರು ಆಗ ಅವರು ಸತ್ಯವಾಗಿ ಎಂದು ಉತ್ತರಕೊಟ್ಟರು. ಅದಕ್ಕೆ ಸ್ವಾಮಿಯವರು ಹಾಗಾದರೆ ನಾನು ನಮ್ಮ ತಂದೆಯಿಂದಲೇ ಹುಟ್ಟಿರುವೆಯೆಂದು ಪೂರ್ವ ಪಕ್ಷವಾಗಿ ಹೇಳುತ್ತೇನೆ ನೀವು ಇದನ್ನು ಸುಳ್ಳು ಮಾಡಿರಿ ಎನ್ನಲಾಗಿ ಆ ಪಂಡಿತರು ಸ್ವಾಮಿಯವರ ಪ್ರಶ್ನೆಗೆ ನಿರುತ್ತರರಾದರು. ಹೀಗೆ ಮುಖಭಂಗಿತರಾದ ಪಂಡಿತರು ಸ್ವಾಮಿಯವರಿಗೆ ಶರಣು ಬಂದರು. ನಂತರ ಅವರನ್ನು ದೀಕ್ಷಿತರೆಡೆಗೆ ಕರೆದುಕೊಂಡು ಬರಲಾಗಿ ದೀಕ್ಷಿತರು ಪಂಡಿತರನ್ನು ಸತ್ಕರಿಸಿ ಕಳುಹಿಸಿಕೊಟ್ಟರು.

ಈ ಪರಿಯಾಗಿ ತಂದೆ ಮಕ್ಕಳಿಬ್ಬರು ತಮ್ಮ ಲೀಲೆಗಳನ್ನು ಜಗತ್ತಿಗೆ ತೋರಿಸುತ್ತ ಲೀಲೆಯಿಂದ ಕಾಲಕಳೆಯುತ್ತಿರಲು ಮಡಿವಾಳ ಸ್ವಾಮಿಯು ವರು ಯಾರೆಂಬದನ್ನು ಕಂಡು ಹಿಡಿಯಲು ಮಡಿವಾಳ ಸ್ವಾಮಿಯವರು ಮುರಗೋಡಿನಲ್ಲಿ ಇರುವಾಗ್ಗೆ ಮತ್ತೊಂದು ಚಮತ್ಕಾರ ಲೀಲೆಯನ್ನು ಮಾಡಿ ತೋರಿಸಿದರು. ಮಡಿವಾಳ ಸ್ವಾಮಿಯವರು ಒಂದು ದಿನ ಬೆಳಿಗ್ಗೆ ಎದ್ದು ಅಗಸಿಬಾಗಿಲು ಹಾಕಿದ್ದರೂ ಸ್ನಾನಕ್ಕಾಗಿ ಮಹಾಬಲೇಶ್ವರ ನಾಮ ಸ್ಮರಣೆಯನ್ನು ಮಾಡುತ್ತ ಹೊರಟರು. ಆ ಮಹಾಬಲೇಶ್ವರ ನಾಮಸ್ಮರ ಣೆಯು ಅಗಸೇಬಾಗಿಲ ಕಾಯುವವರಿಗೆ ಕೇಳುತ್ತಿತ್ತು ಬಾಗಿಲ ಹಾಕಿದ್ದರು ಸ್ವಾಮಿಯವರು ದಾಟಿ ಹೋಗಿದ್ದರು. ಈ ಸುದ್ದಿಯನ್ನು ಅವರು ಊರ ಅಧಿಕಾರಿಗಳಿಗೆ ತಿಳಿಸಲು ಅವರು ಸ್ವಾಮಿಯವರನ್ನು ಹಿಡಿಯುವದಕ್ಕಾಗಿ ಕಾವಲಿಟ್ಟು ಪ್ರಯತ್ನ ಮಾಡಿದರು. ಆದರೂ ಗುಪ್ತಗಾಮಿಯಾಗಿ ಹೋಗುವ ಸ್ವಾಮಿಯವರನ್ನು ಗುರುತಿಸಲು ಸಾಧ್ಯವಾಗಲಿಲ್ಲ. ಹೇಗೆ ತಿಳಿಯಬೇಕು? ಸರ್ವಾಂತರ್ಯಾಮಿಯಾದ ಪರಶಿವನ ಗುಪ್ತ ಸ್ಥಾನವನ್ನು ಗೊತ್ತು ಹಚ್ಚ ಲಿಕ್ಕೆ ಮಾನವರು ಎತ್ನಿಸಿದರೆ ಸಾಧ್ಯವಾದೀತೆ ?

ಹೀಗೆ ವಿಚಿತ್ರ ಲೀಲೆಗಳನ್ನು ತೋರಿಸುತ್ತ ಸ್ವಾಮಿಯವರು ಕೀರ್ತಿ ಶ್ಯಾಲಿಗಳಾಗುತ್ತ ಇರಲು ಅಲ್ಲಿಯ ಕೆಲಸ ಮಾಡುವ ಕುಲಕರ್ಣಿಯವರಿಗೆ ಕರಿನೀರಿಗೆ ಹೋಗುವ ಶಿಕ್ಷೆಯ ಹುಕುಂ ಬಂದಿತು. ಈ ಸುದ್ದಿಯನ್ನು ಮಡಿ ವಾಳಸ್ವಾಮಿಯವರು ಕೇಳಿ ಕುಲಕರ್ಣಿಯವರ ಬಳಿಗೆ ಹೋಗಿ ಅವರನ್ನು ಕರೆದುಕೊಂಡು ಗಾಣಗಾಪೂರಕ್ಕೆ ಯಾತ್ರೆಗೆ ಹೊರಟರು. ನೋಡಿ ವಾಚಕರೇ ಕರಿನೀರಿನ ಶಿಕ್ಷೆಯಾದ ಮನುಷ್ಯನನ್ನು ಕರಕೊಂಡು ಯಾತ್ರೆಗೆ ಹೊರಟಿದ್ದರ ಗೂಡಾರ್ಥವೇನಿರಬಹುದು ಅದು ಸರ್ವಾಂತರ್ಯಾಮಿಗಳಾದ ಸ್ವಾಮಿಯವ ರಿಗೆ ತಿಳಿಯಬೇಕಲ್ಲದೆ ನಮ್ಮಂಥವರಿಗೆ ಹೇಗೆ ತಾನೇ ಸಾಧ್ಯ ಆದರೂ ಸ್ವಾಮಿ ಯವರ ಕೂಡ ಗಾಣಗಾಪೂರಕ್ಕೆ ಹೊರಟು ಮುಂದಾಗುವದನ್ನು ತಿಳಿದು ಕೊಳ್ಳುವಾ.

ಮಹಾಸ್ವಾಮಿಯವರು ಯಾತ್ರೆಗೆ ಹೋದ ನಂತರ ಕೆಲದಿನ ಅಲ್ಲಿ ಉಳಿದರು. ಒಂದು ದಿನ ಸ್ವಾಮಿಯವರು ನದಿಯಲ್ಲಿ ಸ್ನಾನ ಮಾಡಿ ನೀರು ತುಂಬಿದ ತಂಬಿಗೆಯನ್ನು ನದಿಯ ದಂಡೆಯ ಮೇಲೆ ಇಟ್ಟಿದ್ದರು. ಅದನ್ನು

ಕುಲಕರ್ಣಿಯವರು ಮುಟ್ಟಿದರು. ತತಕ್ಷಣವೇ ಸ್ವಾಮಿಯವರು ತಮ್ಮ ಕೈಯಲ್ಲಿಯ ಬೆತ್ತದಿಂದ ಕುಲಕರ್ಣಿಯವರನ್ನು ಹೊಡೆದರು. ಆ ಹೊಡೆತ ದಿಂದ ಕುಲಕರ್ಣಿಯವರ ಪ್ರಾಣವೇ ಹಾರಿಹೋಯಿತು. ಉಳಿದ ಜನರು ಗಾಳಿ ಹಾಕಿ ಅವರ ಪ್ರಾಣ ಬದುಕಿಸಿಕೊಂಡರು. ಮತ್ತು ಸ್ವಾಮಿಯವ ರನ್ನು ನಿಂದಿಸಹತ್ತಿದರು. ಆದರೆ ಅದರಲ್ಲಿ ಯಜ್ಞಾವಂತರು—ದುಂಡು ರಾವಕಾಮತ, ಹಾಜಕಾಮತ, ದೇಶ ಪಂಡಿತ ಮಲ್ಹಾರರಾವ, ಶ್ರೀಪಾದರಾವ ಕಾಮತ, ಎಲ್ಲರೂ ಕುಲಕರ್ಣಿಯವರಿಗೆ ನಿನ್ನ ಪಾಪ ಪರಿಹಾರವಾಯಿತೆಂದು ಹೇಳಿದರು. ಅನಂತರ ಅವರು ಬಡಿಸಿಕೊಂಡ ಮಿತಿಯನ್ನು ಬರೆದಿಟ್ಟಿದ್ದರು ಎಲ್ಲರೂ ಕೂಡಿ ಊರಿಗೆ ಹೊರಟರು. ಬರುವಾಗ ದಾರಿಯಲ್ಲಿ ಎಲ್ಲರಿಗೂ ಸ್ವಾಮಿಯವರು ಮಹಾಬಲೇಶ್ವರ ಧ್ಯಾನವನ್ನು ಮಾಡಲಿಕ್ಕೆ ಹೇಳಿದರು. ಅವರಲ್ಲಿ ವಿಶ್ವಾಸವಿಟ್ಟ ಆ ಭಕ್ತರು ದೇವರ ಹೇಳಿಕೆಯಂತೆ ಧ್ಯಾನ ಮಾಡ ಲಿಕ್ಕೆ ಹತ್ತಿದರು ಮುಂದೆ ಮೂರು ನಾಲ್ಕು ಹರದಾರಿ ಕ್ರಮಿಸಿದ ನಂತರ ಒಂದು ದೊಡ್ಡ ಕೊಳ್ಳ ಹತ್ತಿತು. ಆ ಕೊಳ್ಳದಲ್ಲಿ ನಡೆಯುವಾಗ್ಗೆ ಕುದುರೆ ಮನುಷ್ಯ ಇಬ್ಬರು ಕೂಡಿ ಉರುಳಿಹೋಗಿ ಒಂದು ಸಂಪಗಿ ಗಿಡಕ್ಕೆ ಆಧಾರ ವಾಗಿ ನಿಂತರು. ಅದರಿಂದ ಬದುಕಿದರು. ಅಲ್ಲಿ ಅವರಿಗೆ ಒಂದು ಕೆರೆ ಹತ್ತಿತು ಅವರು ಅಲ್ಲಿ ಷೋಡಶೋಪಚಾರಗಳಿಂದ ಪರಶಿವನ ಪೂಜೆ ಮಾಡಿದರು. ನಂತರ ನೈವಿದ್ಯತಾಂಬೂಲಾದಿಗಳಿಂದ ತೃಪ್ತಿಹೊಂದಿ ಮುಂದೆ ಪ್ರಯಾಣ ಬೆಳಿಸಿ ಮುರಗೋಡಿಗೆ ಬಂದು ಮುಟ್ಟಿದರು.

ಮುರಗೋಡಿಗೆ ಬಂದು ಮುಟ್ಟಿದ ಮೇಲೆ ತಾವು ಗಾಣಗಾಪೂರದಲ್ಲಿ ಕುಲಕರ್ಣಿಯವರನ್ನು ಹೊಡೆದ ತಾರೀಖು ಮತ್ತು ಕುಲಕರ್ಣಿಯವರ ಖಟ್ಲಿ ಖುಲಾಸ ನೋಡಲಾಗಿ ಎರಡೂ ಒಂದೇ ಇದ್ದವು. ಆಗ ಕುಲಕರ್ಣಿ ಯವರ ತಂದೆಯವರಾದ ಮಲ್ಹಾರರಾವ ದೇಶಪಾಂಡೆಯವರು ತನ್ನ ಮಗನ ಪ್ರಾಣ ಉಳಿದದ್ದಕ್ಕಾಗಿ ಮುರಗೋಡಿನ ಮಹಾಜನಕ್ಕೆ ದೊಡ್ಡ ಅನ್ನ ಸಂತ ರ್ಪಣೆ ಮಾಡಿಸಿದರು.

ನೋಡಿ ವಾಚಕರೇ ಇದಕ್ಕಾಗಿಯೇ ಮಹಾತ್ಮರ ನೆಲೆಯನ್ನು ತಿಳಿಯು ವದು ಕಠಿಣವೆಂದು ಹೇಳುವರು ತಾವು ಸರ್ವಾಂತರ್ಯಾಮಿಗಳೂ ತ್ರಿಕಾಲ ಜ್ಞಾನಿಗಳಿದ್ದರೂ ಸಕಲರಿಗೂ ಮಾನವರಂತೆ ತೋರಿ ಅದರಂತೆ ನಡಿಸುತ್ತಾರೆ.

ಇಂಥಹ ಚಮತ್ಕೃತಿಯ ಪವಾಡಗಳಿಂದ ಸ್ವಾಮಿಯವರು ಭಕ್ತರುದ್ಧಾರ ಮಾಡುತ್ತ ದೇಶದಲ್ಲಿ ಕೀರ್ತಿ ಹೊಂದುತ್ತಾ ನಡೆದರು. ಅಂತೇಯೇ ಅವರು

|| ಪರಿತ್ರಾಣಾಯಚ, ಸಾಧೂನಾಂ ।
ವಿನಾಶಾಯಚ, ದುಷ್ಕೃತಾಂ ।
ಧರ್ಮ ಸಂಸ್ಥಾಪ ನಾರ್ಥಾಯ ।
ಸಂಭವಾಮಿ ಯುಗೇ ಯುಗೇ ||

## ಒಕ್ಕುಂದ ವಾಸ

ಭವದಿ ಲೀಲೆಯ ತೋರುತಾಗಳೆ
ಭವದ ಜನಕಾ ಧಾರಿಯಾಗುತೆ ಜಗದಿ ||
ಭವ ಕುಮಾರನು ಮೆರೆದ ಗರಗದ ನಿತ್ಯಸ್ಥಾನದೊಳು ||

ಜಗತ್ತಿನಲ್ಲಿ ಮಹಾತ್ಮರು ಜನ್ಮವೆತ್ತುವಾಗ ಜಗದೋದ್ಧಾರದ ಸದುದ್ದೇಶವನಿಟ್ಟುಕೊಂಡೇ ಜನ್ಮವೆತ್ತಿರುತ್ತಾರೆ. ಸತ್ಪುರುಷರು ಸದುಪದೇಶದಿಂದ ಜಗತ್ತಿನ ಜನಜಾಗೃತಿಗೊಳಿಸಿ ಮಾನವ ಪ್ರಪಂಚದ ಮಾಯಾಂಧಕಾರತೆಯನ್ನು ಹೋಗಲಾಡಿಸುತ್ತಾರೆ ಮಾನವನಿಗೆ ಬ್ರಹ್ಮಚರ್ಯದ ತೇಜೋಬಲದ ಕೂಡ ಆತ್ಮತೇಜೋಬಲವು ಕೂಡಿತೆಂದರೆ ಅವನಿಗೆ ಎಂಥ ಕಾರ್ಯಗಳಾದರು ಸಿದ್ಧಿಯಾಗುವವು. ಅವನು ಏನನ್ನಾದರೂ ಸಾಧಿಸಲಿಕ್ಕೆ ಶಕ್ತನಾಗುತ್ತಾನೆ. ಯೋಗಸಾಮರ್ಥ್ಯವುಳ್ಳ ಬಾಲಬ್ರಹ್ಮಚಾರಿಯ ಯೋಗ ತೇಜಸ್ಸಿನ ಮುಂದೆ ಸಕಲವು ಕಃಪದಾರ್ಥವಾಗುವದು. ಯಾಕಂದರೆ ಇದಕ್ಕೆ ನಮ್ಮ ಮಡಿವಾಳ ಸ್ವಾಮಿಯವರ ಚರಿತ್ರೆಯೇ ಸಾಕ್ಷಿ ಸಾಕ್ಷಾತ್ತ ಪರಶಿವನ ಕುಮಾರರಾದ ಇವರ ಆತ್ಮತೇಜೋಬಲದ ಕ್ಷುಬ್ಧ ವಕ್ಷವಾಗ್ನಿಯ ಕಿಡಿಯು ಹೊತ್ತಿ ಹಿಂದುಸ್ಥಾನದ ಆತ್ಮಶ್ರೀ ಶ್ರೇಷ್ಠ ವೀರರಾಣಿಯಿಂದ ಆಳಲ್ಪಟ್ಟ ಕಿತ್ತೂರ ಸಂಸ್ಥಾನದ ಧ್ವಂಸಕ್ಕೆ ಕಾರಣವಾಯಿತು. ಅದಕ್ಕಾಗಿ ಜನರೂಢಿಯುಂಟು. "ಸನ್ಯಾಸಿಯನ್ನು ತಡವಿದರೆ ಮೈಯೆಲ್ಲ ಬೂದಿ" ಎಂಬತೆ ಸನ್ಯಾಸಿಗಳಾದ ಮಹಾಸ್ವಾಮಿಯವರು ತಮ್ಮ ಆತ್ಮತೇಜಸ್ಸಿನ ಜಗದ ಜನರಲ್ಲಿ ಲೀಲೆಗಳನ್ನು ತೋರಿ ಚಮತ್ಕಾರವಾದ ಅನೇಕ ಪವಾಡಗಳನ್ನು

ಜಗತ್ತಿಗೆ ತೋರಿಸುತ್ತ ಜಗದ ಜನರುದ್ಧಾರ ಮಾಡಿದರೆಂಬದನ್ನು ಮುಂಬರುವ ಅವರ ಚರಿತ್ರೆಯನ್ನು ಓದಿ ವಾಚಕರು ಮನಗಾಣಬಹುದು.

ಶ್ರೀಗುರು ಮಡಿವಾಳ ಸ್ವಾಮಿಯವರು ತೀರ್ಥಯಾತ್ರೆಗೆ ಹೋದಾಗ ಒಮ್ಮೆ ಶೀಲಾನದಿಯ ದಂಡೆಯಲ್ಲಿ ಸಂಚರಿಸುತ್ತಿದ್ದಾಗ್ಗೆ ಅವರಿಗೆ ಒಂದು ಘೋರಾರಣ್ಯವು ಹತ್ತಿತು. ಅಲ್ಲಿ ನಾಲ್ಕಾರು ಹರದಾರಿಗಳವರೆಗೆ ಊರು ಇದ್ದಿಲ್ಲ. ಆ ಘೋರಾರಣ್ಯದಲ್ಲಿ ತೊಯ್ಸಿಕೊಂಡು ತಿರುಗುತ್ತಿರುವಾಗ್ಗೆ ಒಂದು ಈಶ್ವರ ದೇವಸ್ಥಾನವು ಹತ್ತಿತು. ಅಲ್ಲಿ ಇಳಿದು ಶಿಷ್ಯರೊಂದಿಗೆ ತಮ್ಮ ಅರಿವೆಗಳನ್ನು ಹಿಂಡಿಕೊಂಡು ರಾಮದಾಸರಿಗೆ ಘುಡಘುಡಿ ತಯಾರಿಸಲಿಕ್ಕೆ ಹೇಳಿದರು. ಅವರು ತಯಾರಿಸಿಕೊಟ್ಟ ಕೂಡಲೇ ಸ್ವಾಮಿಯವರು ಅದರ ಮೇಲೆ ಹಳ್ಳ ಕಟ್ಟಿಗೆಗಳನ್ನಿಟ್ಟು ಬೆಂಕಿಯನ್ನು ಹೊತ್ತಿಸಿದರು. ಅದೇ ಬೆಂಕಿಯಿಂದ ಎಲ್ಲರೂ ಕಾಸಿಕೊಂಡರು. ಆ ಮೇಲೆ ಅಲ್ಲಿಯ ಒಂದು ಕಲ್ಲು ತಂದು ಬೆಂಕಿ ಹಾಕಲಿಕ್ಕೆ ಹೇಳಲಾಗಿ ಅವರು ಆದರಂತೆ ಮಾಡಲು ಬೆಂಕಿಯಾಗಿ ಎಲ್ಲರು ಕಾಸಿಕೊಂಡ ನಂತರ ಹತ್ತರ ಇದ್ದ ಗಜಗದ ಮೋಳೆಯಲ್ಲಿಯ ತೊಪ್ಪಲದ ಪಲ್ಲೆ ಮಾಡಿಸಿ ಊಟಮಾಡಿದರು. ಇದೆಲ್ಲವೂ ತಮ್ಮ ಗುರುಗಳ ನಾಮಸ್ಮರಣೆಯಿಂದಲೇ ಸಾಗಿಸಿದರು. ಮುಂದೆ ಅಲ್ಲಿಂದ ಊರಿಂದೂರಿಗೆ ಪ್ರಯಾಣ ಮಾಡುತ್ತ ಶೀಲಾನದಿಗೆ ಬಂದು ಮುಟ್ಟಿದರು. ಮುಂದೆ ಮಹಾಸ್ವಾಮಿಯವರು ಒಂದು ಊರ ಸಂಸ್ಥಾನಿಕನಿಂದ ಮರ್ಯಾದೆ ಹೊಂದಿ ಮುಂದೆ ಸಾಗಿ ಒಂದು ಸೊಗಲವನ್ನು ಸೇರಿದರು.

ಅಲ್ಲಿ ಬಂದ ಮೇಲೆ ಮಹಾಸ್ವಾಮಿಯವರು ಗುರ್ಲಹೊಸೂರ ಪಡಿಅಚ್ಚಿನ ರುದ್ರಪ್ಪನ ಕೂಡ ಕುಂಭಕೋಣ ಮೊದಲಾದ ತೀರ್ಥಗಳನ್ನು ತಿರುಗಿ ಬಂದು ಕೆಲದಿವಸ ಸೊಗಲದಲ್ಲಿ ಇರಹತ್ತಿದರು. ಅಲ್ಲಿಂದ ಮಹಾಸ್ವಾಮಿಯವರು ದೊಡವಾಡಕ್ಕೆ ಬಂದು ಅಂಬಪ್ಪಾ ಸವಣೂರ (ಎಲಿಗಾರ) ಎಂಬ ಶ್ರೀಮಂತನ ಮನೆಯಲ್ಲಿ ಇರಹತ್ತಿದರು. ಇಲ್ಲಿ ಇರುವಾಗ್ಗೆ ಅವರು ಪ್ರತಿನಿತ್ಯ ಪಗಡಿಯ ಆಟವನ್ನಾಡುತ್ತಿದ್ದರು. ಒಂದು ದಿವಸ ಅವರು ಆಡುವಾಗ ರಾಮಚಂದ್ರಪ್ಪನೆಂಬವರು ಸುಳ್ಳು ಆಟ ಆಡಿದ್ದರಿಂದ ಮಹಾಸ್ವಾಮಿಯವರು ಕೋಪಿಸಿ ರಾಮ್ಯಾನನ್ನು ಭಾವಿಯಲ್ಲಿ ಒಗೆಯುತ್ತೇನೆ ಎಂದು ಹಟ ಹಿಡಿದರು. ಆಗ ಆ ರಾಮಚಂದ್ರಪ್ಪನವರ ತಾಯಿಯು ಬಂದು

ಸ್ವಾಮಿಯವರಿಗೆ ತನಗೆ ಒಬ್ಬನೇ ಮಗನು ಕೊಲ್ಲಬೇಡಿ ತಂದೆ ಎಂದು ಅಂಗ ಲಾಚಿ ಬೇಡಿಕೊಳ್ಳಲಾಗ ಸ್ವಾಮಿಯವರು ಕ್ಷಮಿಸಿ ರಾಮನನ್ನು ಒಗೆಯುವ ದರ ಬದಲು ಪಗಡಿಕಾಯಿ ಒಗೆಯುತ್ತೇನೆ ಅಂತಾ ಅದನ್ನು ಭಾವಿಯಲ್ಲಿ ಒಗೆದರು. ಮುಂದೆ ಆ ಶ್ರೀಮಂತರ ಮನೆತನದವರು ತಮ್ಮ ಆದಿ ದೇವರ ದೇವಸ್ಥಾನವನ್ನು ನೋಡಲು ಅಂತಾ ನವಾಪೂರ ಎಂಬಲ್ಲಿಗೆ ಹೊರಟರು. ಆಗ ಸ್ವಾಮಿಯವರು ಹೋಗಬೇಡವೆಂದು ಹೇಳಿದರು. ಅದಕ್ಕೆ ಅವರು ಒಪ್ಪದೆ ಸ್ವಾಮಿಯವರ ಮಾತು ಮೀರಿ ಹೊರಟರು. ಮತ್ತು ಮನೆಯ ಯಜಮಾನತ್ವವನ್ನು ಸ್ವಾಮಿಯವರಿಗೆ ಒಪ್ಪಿಸಿದರು. ಅವರು ಹೋದ ಮೇಲೆ ಸ್ವಾಮಿಯವರು ಮನೆಯಲ್ಲಿ ಸ್ವಚ್ಛ ಮಾಡಿ ಅಲ್ಲಿಂದ ಮನೆಯ ಒಳ ಅಗಳಿ ಗಳನ್ನು ಹಾಕಿ ಹೊರಬಿದ್ದು ಹೋದರು. ಅವರು ಶ್ರೀ ಅಂಬಪ್ಪನವರು ತಿರುಗಿ ಬರುವದರೊಳಗಾಗಿ ಎಲ್ಲವೂ ನಾಶವಾಗಿತ್ತು ಅದಕ್ಕಂತೇ ಮಹಾತ್ಮರು ಹೇಳುವರು.

"ಗುರುವನೊಲಿಮಿ ಇರಲು ಸಕಲ ವೈಭವಟ್ಟುದು ಗುರುತಾ ಮುನಿದರೆ ಸಕಲವೂ ನಾಶವಹೊಂದುದು."

ಅನಂತರ ಮಹಾಸ್ವಾಮಿಯವರು ಮುರಗೋಡ ನಾಡಹೊಸೂರಿಗೆ ಹೋಗಿ ಅಲ್ಲಿ ಮಠ ಕಟ್ಟಿಸಿಕೊಂಡು ಕೆಲದಿವಸ ವಾಸಮಾಡಲಿಕ್ಕೆ ಹತ್ತಿದರು ಅಲ್ಲಿ ಪ್ರತಿವರ್ಷ ಉತ್ಸವವಾಗಲಿಕ್ಕೆ ಹತ್ತಿತು. ಮುಂದೆ ಕೆಲದಿನಗಳ ಮೇಲೆ ಬೈಲಹೊಂಗಲ ತಾಲೂಕ ಪೈಕಿ ಒಕ್ಕುಂದವೆಂಬ ಗ್ರಾಮದಲ್ಲಿಯ ಕೆಲವು ಜನರು (೧) ಶಿವಲಿಂಗಪ್ಪನಾಯ್ಕ, ( ) ಮುದಕಪ್ಪಾ ಹಲಕೇರಿ, (೩) ಶಿವ ಲಿಂಗಪ್ಪಾ ತರಗಾರ, (೪) ಗಂಗಪ್ಪಾ ಹೂಗಾರ, ಮುಂತಾದವರು ಸ್ವಾಮಿ ಯವರನ್ನು ಕರೆದುಕೊಂಡು ತಮ್ಮ ಗ್ರಾಮಕ್ಕೆ ಬಂದು ಭಕ್ತಿಯಿಂದ ನಡೆದು ಕೊಳ್ಳಲಿಕ್ಕೆ ಹತ್ತಿದರು.

ಮಹಾಸ್ವಾಮಿಯವರಿಗೆ ಯಾವಾಗಲೂ ಅಭ್ಯಂಗಸ್ನಾನ ಮಾಡುವ ರೂಢಿ ಇತ್ತು. ಅದೇ ಸಂಪ್ರದಾಯದಂತೆ ಅವರು ತಮ್ಮ ಶಿಷ್ಯರಿಗೆ ನೀರು ಕಾಯಿಸಲಿಕ್ಕೆ ಹೇಳಿದರು. ಆದರೆ ಪ್ರತಿನಿತ್ಯದಂತೆ ನೀರು ಕಾಯಿಸದೆ ಅಂದು ಗುರುವಿನ ಸತ್ವ ಪರೀಕ್ಷೆ ಮಾಡಬೇಕೆಂದು ಶಿಷ್ಯರ ಮನಸ್ಸಿನಲ್ಲಿ ಹುಟ್ಟಿ ನೀರು ಹೆಚ್ಚು ಕಾಯಿಸಿದರು ಇದು ಸರ್ವಾಂತರ್ಯಾಮಿಯಾದ ಪರಶಿವನಿಗೆ

ತಿಳಿದರೂ ಸುಮ್ಮನೇ ಇದ್ದರು. ನೋಡಿ ವಾಚಕರೇ ದುಷ್ಟರು ಕಾಡದ ಹೊರತು ಸುಜನರ ಸತ್ವ ಪರೀಕ್ಷೆಯಾಗಲಾರದು. ಅದರಂತೆ ಮಹಾತ್ಮರು ಮೌನದಿಂದ ಇದ್ದದ್ದನ್ನು ಕಂಡು ಮೂರ್ಖರು ತಮ್ಮ ಕಾರ್ಯ ಪ್ರವರ್ತರಾದರು. ಮಹಾಸ್ವಾಮಿಯವರ ಮೈಗೆ ಎಣ್ಣೆಯನ್ನು ಹಚ್ಚಿ ನೀರು ಹಣಿಸಲಿಕ್ಕೆ ಹತ್ತಿದರು. ಆ ಬಿಸಿ ನೀರಿನಿಂದ ಮಹಾಸ್ವಾಮಿಯವರ ಹೃದಯ ತಾಪವುಳದ ಬೆಂಕಿಯು ಹಲಕೇರಿ ಮುದಕಪ್ಪನ ಕೋಣೆಯನ್ನು ಸುಡ ಹತ್ತಿತು. ಅವರ ಮನೆಯವರು ಹೊಯ್ಯಕೊಳ್ಳುತ್ತ ಸ್ವಾಮಿಯವರು ಸ್ನಾನ ಮಾಡುತ್ತಿದ್ದಲ್ಲಿಗೆ ಬಂದು ನಡೆದ ವೃತ್ತಾಂತವನ್ನು ನಿವೇದಿಸಿದರು. ಅದಕ್ಕೆ ಸ್ವಾಮಿಯವರು ಏಲೇ ಶಿವಲಿಂಗಾ ನೀರಿಗೆ ತಣ್ಣೀರು ಸುರವೋ ಬೆಂಕಿ ತಾನಾಗಿಯೇ ಆರುವದು. ಎಂದು ಹೇಳಲಾಗಿ ಅವರು ಅದರಂತೆ ಮಾಡಲು ಹತ್ತಿದ ಬೆಂಕಿ ಆರಿ ಹೋಯಿತು. ಅನಂತರ ತಾವು ಮಾಡಿದ ಕೃತಿಗಾಗಿ ಪಶ್ಚಾತ್ತಾಪಬಟ್ಟು ಗುರುಗಳಿಗೆ ಶರಣುಹೋದರು. ಅನಂತರ ಮುಂದೆ ಕೆಲದಿವಸ ಸ್ವಾಮಿಯವರು ಅಲ್ಲಿ ಇರುವಾಗ ೬೦ ಮಂದಿ ವಿದ್ವಾಂಸರು, ೩ ಜನರು ಹಾಡುಗಾರರು, ಮದ್ದಿ ಬಾರಿಸುವ ರಾಮಚಂದ್ರಪ್ಪನವರು ಸ್ವಾಮಿಯವರ ದರ್ಶನಕ್ಕಾಗಿ ಒಕ್ಕುಂದಕ್ಕೆ ಬಂದರು ಸ್ವಾಮಿಯವರಲ್ಲಿ ಅವರು ಪ್ರತಿನಿತ್ಯ ಶಾಸ್ತ್ರ ತರ್ಕವಿತರ್ಕವನ್ನೂ ಭಗವನ್ನಾಮಸಂಕೀರ್ತನೆಯನ್ನೂ ಮಾಡುತ್ತ ಆನಂದದಿಂದ ಕಾಲಕಳೆಯಹತ್ತಿದರು. ಹೀಗೆ ಇರುವಾಗ ಆ ಹಾಡುಗಾರ ಶಿವಲಿಂಗಪ್ಪನಾಯಕರಿಗೆ ವೈಯಮನಸ್ಸು ಉಂಟಾಯಿತು. ಇದನ್ನು ಸ್ವಾಮಿಯವರು ಕಂಡುಹಿಡಿದು ಆ ಶಿವಲಿಂಗಪ್ಪನಿಗೆ ಬುದ್ಧಿ ಹೇಳಿದಾಗ್ಯೂ ಅವನು ಕೇಳದೆ ಇದ್ದದ್ದರಿಂದ ಆ ವಿದ್ವಾಂಸರು ಮತ್ತು ಹಾಡುಗಾರರು ತಮ್ಮ ತಮ್ಮ ಊರಿಗೆ ಹೊರಟುಹೋದರು. ಮುಂದೆ ಕೆಲ ದಿನಗಳ ಮೇಲೆ ಒಕ್ಕುಂದಕ್ಕೆ ಶಿವಪೇಟೆಯ ಮಹಾಲಿಂಗ ಸ್ವಾಮಿಯವರು ಸಂಚಾರ ಮಾಡಿಕೋತ ಒಕ್ಕುಂದಕ್ಕೆ ಬಂದರು. ಆಗ ಅವರು ಮಹಾಸ್ವಾಮಿಯವರಿಗೆ ನಮಸ್ಕರಿಸಿ ಕೈಮುಗಿದುಕೊಂಡು ನಿಲ್ಲಲಾಗಿ ಪರರಿಂಗಿತಜ್ಞರಾದ ಮಹಾಸ್ವಾಮಿಯವರು ಅವರ ಮನಸ್ಸಿನ ಕಳವಳ ತಿಳಿದು ಏಕೆ ಮಹಾಲಿಂಗಾ ಸುಮ್ಮನೆ ನಿಂತುಕೊಂಡೆ ? ಎಂದು ಕೇಳಲು ಅದಕ್ಕೆ ಮಹಾಲಿಂಗಸ್ವಾಮಿಯವರು ತಂದೆ ನನಗೆ ಒಂದು ಲಕ್ಷ ರೂಪಾಯಿಗಳು ಬೇಕಾ

ಗಿವೆ ಎಂದು ಹೇಳಿದರು. ಅದಕ್ಕೆ ಮಹಾಸ್ವಾಮಿಯವರು ಮಹಾಲಿಂಗಾ ನಾನು ಎಲ್ಲಿಂದ ಕೊಡಲಿ ಸ್ವಾಮಿಯು ತಾನಾಗಿಯೇ ನನಗೆ ಕೊಡುತ್ತಾನೆ. ನೀನು ಇಲ್ಲಿಂದ ಚಿತ್ರದುರ್ಗಕ್ಕೆ ಹೋಗು ಎಂದು ಅಪ್ಪಣೆ ಮಾಡಿದರು. ಸ್ವಾಮಿಯವರ ಅಪ್ಪಣೆಯಂತೆ ಮಹಾಲಿಂಗಸ್ವಾಮಿಯವರು ಚಿತ್ರ ದುರ್ಗಕ್ಕೆ ಹೋಗಲಾಗಿ ಅಲ್ಲಿ ಶಿವಾಧೀನರಾಗಲಿದ್ದ ಪಟ್ಟ ಚರಮೂರ್ತಿ ಮುರಘಾರಾಜೇಂದ್ರರ ಚಿರಪಟ್ಟಕ್ಕೆ ಮಹಾಲಿಂಗ ಸ್ವಾಮಿಯವರನ್ನು ಕಟ್ಟಿದರು. ನೋಡಿ ವಾಚಕಮಹಾಶಯರೇ ಸಕಲ ಜಗದ ಜಗದಾ ಧರನಾದ ಪರಶಿವನ ಕರುಣವಾಯಿತೆಂದರೆ ಶಿರಿಸಂಪತ್ತಿಗೆ ಏನು ಕಡಿಮೆ? ಒಂದು ಲಕ್ಷ ರೂಪಾಯಿಗಳನ್ನು ಬೇಡಲಿಕ್ಕೆ ಬಂದ ಮಹಾಲಿಂಗಸ್ವಾಮಿ ಯವರಿಗೆ ಮಹಾಸ್ವಾಮಿಯವರ ಕರುಣೆಯಿಂದ ಸ್ಥಿರಪಟ್ಟವೇ ಸಿಕ್ಕಿತು. ಆದಕ್ಕಾಗಿ ಮಹಾತ್ಮರ ವಾಣಿಗೆ ಮಹತ್ವವಿದೆ. ಬ್ರಹ್ಮಚರ್ಯ ತೇಜೋ ಬಲವು ವಿಶ್ವಜಗತ್ತನ್ನು ಗೆಲ್ಲುವಂತಹ ಶಕ್ತಿಯುಳ್ಳದ್ದು ಆದೆ. ಬ್ರಹ್ಮ ಚರ್ಯದ ತೇಜೋಬಲದ ಮಹಾತ್ಮನು ನುಡಿದನೆಂದರೆ ಆದಕ್ಕೆ ಪ್ರತಿ ಹೊಡಲು ಪರಶಿವನಿಂದಲೂ ಕೂಡ ಅಸಾಧ್ಯವಿದೆ ಅದಕ್ಕಂತೆಯೇ ಮಡಿವಾಳ ಸ್ವಾಮಿಯವರು ತಮ್ಮ ಬ್ರಹ್ಮಚರ್ಯದ ತೇಜೋಬಲದಿಂದಲೂ ಯೋಗ ಸಾಮರ್ಥ್ಯದಿಂದಲೂ ವಿಶ್ವದಲ್ಲಿ ವಾಕ್‌ಶಿದ್ಧ ಪುರುಷರೆಂದು ಹೆಸರಾಗಿದ್ದರು.

ಅಲ್ಲಿಂದ ಹೀಗೆ ಕೆಲಕಾಲ ಮಹಾಸ್ವಾಮಿಯವರು ಕಾಲಕಳೆಯುತ್ತಿರ ಲಾಗಿ ಒಂದು ದಿವಸ ರಾತ್ರಿ ಮಹಾಸ್ವಾಮಿಯವರು ನಾಯಿಕ ಶಿವಲಿಂಗಪ್ಪ ನನ್ನು ಕರೆದು ಶಿವಲಿಂಗಾ, ೪-೮ ಮಂದಿ ಗಟ್ಟಿಗರನ್ನು ಕರೆದುಕೊಂಡು ನಿಮ್ಮ ಹೊಲಕ್ಕೆ ಹೋಗು ಎಂದು ಹೇಳಲು ಸ್ವಾಮಿಯವರ ಮಾತಿನಲ್ಲಿ ವಿಶ್ವಾಸವಿಟ್ಟ ಶಿವಲಿಂಗಪ್ಪನವರು ಹೊಲಕ್ಕೆ ಹೋಗಲಾಗಿ ಅವರ ಹಿರಿಯರು ಹುಗಿದಿಟ್ಟ ದ್ರವ್ಯವನ್ನು ಕಳ್ಳರು ಅಗೆದಿದ್ದರು. ಶಿವಲಿಂಗಪ್ಪನವರು ಹೋದುದನ್ನು ನೋಡಿ ಕಳ್ಳರು ಓಡಿಹೋದರು. ಶಿವಲಿಂಗಪ್ಪನವರು ಆ ಹೊನ್ನಿನ ಕೊಡವನ್ನು ತೆಗೆದು ಕೊಂಡು ಬಂದು ಸ್ವಾಮಿಯವರಿಗೆ ತಿಳಿಯದಂತೆ ತಮ್ಮ ಮನೆಯಲ್ಲಿ ಇಟ್ಟು ಕೊಂಡರುಸರ್ವಾಂತರ್ಯಾಮಿಯಾದ ಗುರುವಿಗೆ ಅದು ತಿಳಿದು ಶಿವಲಿಂಗಪ್ಪನ ಮೇಲಿನ ವಿಶ್ವಾಸವು ಹಾರಿ ಮಹಾಸ್ವಾಮಿಯವರು ಒಂದು ದಿನ ರಾತ್ರಿ ಶಿವ

ಲಿಂಗಪ್ಪನ ಮನೆಯಿಂದ ಹೊರಬಿದ್ದು ಹೊರಟರು. ಮಹಾಸ್ವಾಮಿಯವರು ಮನೆಬಿಟ್ಟು ಹೋಗುವದನ್ನು ಅಲ್ಲಿ ಹಡಪದವನ ಹೆಂಡತಿ ನೋಡಿ ಗಂಡನಿಗೆ ತಿಳಿಸಿದಳು. ಅದು ಮಳೆಗಾಲವಾದ್ದರಿಂದ ಮಲಾಪಹಾರಿಯು ತನ್ನ ವಿಶಾಲ ವಾದ ಬುಜ ಬುಜೆಗಳನ್ನು ಒಡಲಿನಿಂದ ಹರವಿ ಆಳವಾಗಿ ಸಪ್ಪಳ ಮಾಡುತ್ತ ಹರಿಯುತ್ತಿದ್ದಳು ಆ ಹಡಪದವನು ಸ್ವಾಮಿಯವರ ಹಿಂದಿನಿಂದ ಬರುವದ ರೊಳಗಾಗಿ ವಿಶಾಲ ಹೃದಯ ಸ್ಥಳದ ಮಲಾಪಹಾರಿಯನ್ನು ದಾಟಿ ಮಹಾ ಸ್ವಾಮಿಯವರು ಆಚೆಯ ದಂಡೆಗೆ ಹೋಗಿದ್ದರು ಅವರು ಹೋಗುವಾಗ "ಭಾಗೀರಥಿ ಪ್ರಯಾಗರಾಜ ಗುರಭ್ಯೋನಮಃ" ಎಂದು ನಾಮಸ್ಮರಣೆ ಮಾಡು ತ್ತಿದ್ದರು. ಆಗ ಆ ಹಡಪದವನು ಆಶ್ಚರ್ಯಚಕಿತನಾಗಿ ಊರಲ್ಲಿ ಹೋಗಿ ಜನರನ್ನು ಎಬ್ಬಿಸಿಕೊಂಡು ಅಂಬಿಗರನ್ನು ಕರೆದುಕೊಂಡು ನಾವಿನಿಂದ ದಾಟಿ ದಂಡೆಗೆ ಬಂದರು. ಅಲ್ಲಿ ಸ್ವಾಮಿಯವರು ಮಹಾಬಲೇಶ್ವರ ಧ್ಯಾನ ಮಾಡುತ್ತ ಕುಳಿತಿದ್ದರು. ಆ ಪರಮಶಿಷ್ಯ ಹಡಪದವನ ಹೊರತಾಗಿ ಉಳಿದವರು ಎಲ್ಲರೂ ತಿರುಗಿಹೋದರು. ಅವನು ಸ್ವಾಮಿಯವರಿಗೆ ಮಳೆಯು ಬಡಿಯದಂತೆ ಚಾಟವ ನೋಡಿಕೊಂಡು ಅವರು ಶಾಂತವಾಗುವವರಿಗೆ ಅವರ ಸೇವೆ ಮಾಡುತ್ತ ಅಲ್ಲಿಯೇ ಉಳಿದನು. ಮಹಾಸ್ವಾಮಿಯವರು ಶಾಂತರಾದ ಮೇಲೆ ಅವರಿಗೆ ಮುಶೆಪ್ಪನ ಗುಡಿಯಲ್ಲಿ ದಯಮಾಡಿಸಲಿಕ್ಕೆ ಬೇಡಿಕೊಳ್ಳಲು ಸ್ವಾಮಿ ಯವರು ಶಾಂತ ಚಿತ್ತದಿಂದ ಅವನ ಕೂಡ ಹೋಗಿ ಮುಶೆಪ್ಪನ ಗುಡಿಯಲ್ಲಿ ಇದ್ದರು. ಮುಂದೆ ಕೆಲದಿನಗಳ ಮೇಲೆ ಅಲ್ಲಿಗೆ ಕಿತ್ತೂರ ಗರಗದ ಮುದ ಕಪ್ಪನು ತನ್ನ ಮನೆ ದೇವರಿಗೆ ಮಾಡಿಸಲಿಕ್ಕೆಂದು ಬಂದಿದ್ದನು ಆಗ ಅವನು ಸ್ವಾಮಿಯವರನ್ನು ಕಂಡನು ಮಹಾಸ್ವಾಮಿಯವರಿಗೆ ನೈವಿದ್ಯ ತಂದು ಇಟ್ಟನು. ಆಗ ಸ್ವಾಮಿಯವರು ನೀನು ಯಾರು ಎಂದು ಕೇಳಲಾಗಿ ಎಪ್ಪಾ ನಾನು ಗರಗದ ಮುದಕ್ಯಾ, ನೈವಿದ್ಯವನ್ನು ಸ್ವೀಕರಿಸು ತಂದೆ ಎಂದು ಕೇಳಲು ಮಹಾಸ್ವಾಮಿಯವರು ಕಿತ್ತೂರ ವೃತ್ತಾಂತವನ್ನು ಕೇಳ ಲಾರಂಭಿಸಿದರು ಅಷ್ಟರಲ್ಲಿ ಆ ವೃತ್ತಾಂತವನ್ನು ಕೇಳುತ್ತಲೇ ಮಹಾಸ್ವಾಮಿ ಯವರು ಚನ್ನಮ್ಮರಾಣಿಯ ಸದ್ಗುಣಗಳನ್ನು ನೆನೆದು ಅವಳನ್ನು ಹಾಡಿಹರಿ ಸಿದರು. ಮತ್ತು ಕೋಪಾದ್ರೇಕದಲ್ಲಿ ಅವರು ಕಿತ್ತೂರ ಸಂಸ್ಥಾನಕ್ಕೆ ಕೆಟ್ಟ ನಿಗ್ರಹಿಸಿದನ್ನು ನೆನದ ಕೂಡಲೆ ಅವರ ಹೃದಯದಲ್ಲಿ ಒಡವಾಗ್ನಿಯು

ಪ್ರಜ್ವಲಿಸಿತು. ಮುಂದೆ ಭವಬಂಧನತೀತರಾದ ಮಹಾಸ್ವಾಮಿಯುವರಲ್ಲಿ ಆ ಕೋಲುಮಿಂಚು ಕಡೆಯುವರೆಗೆ ಉಳಿಯಲಿಲ್ಲ. ಆಗ ಅವರು ಮುದಕಪ್ಪನಿಗೆ ಅದನ್ನು ತೋರಗೊಡದೆ ಅವನಿಗೆ ಆಶೀರ್ವಾದಮಾಡಿ ಕಾಯಿಯನ್ನು ಉಡಿಯಲ್ಲಿ ಹಾಕುವಾಗ್ಗೆ ಆ ಕಾಯಿಯು ಕೆಳಗೆ ಬಿದ್ದಿತು ಅದಕ್ಕೆ ಮುದಕಪ್ಪನು ಆಶ್ಚರ್ಯದಿಂದ ಸ್ವಾಮಿಯುವರನ್ನು ನಮಸ್ಕರಿಸಿ ಅಲ್ಲಿಂದ ಹೊರಟುಹೋದನು ಮುಂದೆ ಸ್ವಲ್ಪು ಹೊತ್ತಿನ ಮೇಲೆ ನುತ್ತೆ ಮಲಾಪಹಾರಿ ನದಿಯು ತನ್ನ ಹೃದಯುವನ್ನು ಪಸರಿಸಿ ಒಡಲು ಬಿಟ್ಟು ಹೊರಬೀಳಲು ಊರಲ್ಲಿ ಸಾಮಾನುಗಳು ತೇಲ ಹತ್ತಿದವು. ಆಗ ಆ ಗ್ರಾಮದ ಜನರು ಮಹಾಸ್ವಾಮಿಯುವರ ಬಳಿಯಲ್ಲಿ ಬಂದು ಬೇಡಿಕೊಂಡರು. ಆಗ ಆ ಜನರ ಕೂಡ ಗರಗದ ನರಿ ಶಿದ್ಲಿಂಗಪ್ಪಾ, ನೀಲಗಾರ ಕೃಷ್ಟಪ್ಪಾ, ಹಣಗಿ ಗಂಟೆಪ್ಪಾ, ಮರಬದ ಅದೃಶ್ಯಪ್ಪಾ, ಇವರೆಲ್ಲ ಅರವಳ್ಳಿ ದೈವದವರು ಇದ್ದರು. ಅವರು ಸ್ವಾಮಿಯುವರನ್ನು ಬೇಡಿಕೊಳ್ಳಲಾಗಿ ಸ್ವಾಮಿಯುವರು ಎದ್ದು ಮಂಚದ ಮೇಲಿಂದ ಕಾಲು ಕೆಳಗೆ ಇಡಲು ಪಾದಗಳು ತೋಯ್ದವು. ಆಗ ಸ್ವಾಮಿಯುವರು ಒಂದು ಕಾಯಿ ತರಿಸಿ ಕೈಯಲ್ಲಿ ತಕ್ಕೊಂಡು ಮಲಪ್ರಭಾ ಮಾಯುಶೀಜಯು ಎಂದು ನೀರಲ್ಲಿ ಬಿಡಲು ಮಹಾಸ್ವಾಮಿಯುವರ ಶಕ್ತಿಪರೀಕ್ಷೆಗಾಗಿ ಎಂಬಂತೆ ಮಲಾಪಹಾರಿಯು ತನ್ನ ಒಡಲನ್ನು ಪಸರಿಸಿದಳು. ಅಷ್ಟರಲ್ಲಿ ಜಲಚರಗಳು ಗುಡಿಯುಲ್ಲಿ ಪ್ರವೇಶಿಸಿದವು. ಮಹಾಸ್ವಾಮಿಯುವರು ಮತ್ತೊಂದು ಕಾಯಿಯನ್ನು ತಗೆದುಕೊಂಡು ಮೊದಲಿನಂತೆ ಮಲಪ್ರಭಾ ಮಾಯುಶೀಜಯು ಎಂದು ಮಲಾಪಹಾರಿಯುನ್ನು ಸ್ತುತಿಸಿ ಕಾಯಿಯುನ್ನು ನೀರಲ್ಲಿ ಬಿಡಲಾಗಿ ಪಸರಿಸಿದ ತನ್ನ ಒಡಲನ್ನು ಮಲಾಪಹಾರಿಯು ತನ್ನ ಒಳಗೆ ತಕ್ಕೊಂಡಳು.

ನೋಡಿ ವಾಚಕರೇ ಮಹಾಸ್ವಾಮಿಯುವರು ತಮ್ಮ ಯೋಗಸಾಮರ್ಥ್ಯದಿಂದ ಬ್ರಹ್ಮವಿರಚಿತ ಸೃಷ್ಟಿಯ ನೇಮಾದಿಗಳನ್ನೂ ಕೂಡಾ ತಡೆದು ಹಿಡಿಯುವಷ್ಟು ಶಕ್ತಿವಂತರಾಗಿದ್ದರೆಂಬದರಲ್ಲಿ ಸಂದೇಹವಿಲ್ಲಾ.

ಇಂತು ಲೀಲೆಯ ತೋರುತಾತನು |
ಬ್ರಾಂತಿಬಿಡಿಸುತೆ ಸಕಲ ಜಗದ |
ಶಾಂತ ರೂಪನು ಸ್ಥಾಪಿಸಿದ ತನ್ನ ಮಠವನು ನಿತ್ಯ ಗರಗದೊಳು

ಶ್ರೀಗುರು ಮಡಿವಾಳ ಸ್ವಾಮಿಯುವರು ಇಂತು ಲೀಲೆಗಳನ್ನು ತೋರುತ್ತ ಹಿಂದುಸ್ಥಾನದ ಸಕಲ ಭಾಗಗಳನ್ನು ಸಂಚರಿಸಿ ತಮ್ಮ ಜನ್ಮಸ್ಥಾನವಾದ ಕರ್ನಾಟಕಾಂಬೆಯಲ್ಲಿ ಅಲ್ಲಲ್ಲಿ ಸಂಚರಿಸಲಾರಂಭಿಸಿದರು. ಅವರು ಒಕ್ಕುಂದ ದಿಂದ ಹೊರಬಿದ್ದ ಮೇಲೆ ಕೆಲದಿವಸ ಸೊಗಲದಲ್ಲಿ ವಾಸಮಾಡಿದರು. ಆಗ ಅವರ ದರ್ಶನಕ್ಕೆ ಪ್ರತಿನಿತ್ಯ ಜನರು ಬರುತ್ತಲೇ ಇದ್ದರು. ಒಂದು ದಿವಸ ಮಲ್ಲಪ್ಪನೆಂಬ ಭಕ್ತನು ಅವರ ದರ್ಶನಕ್ಕೆ ಬಂದಾಗ ಅವರ ಕೂಡ ಚಿನ್ನಾಟ ವಾಡುತ್ತಿದ್ದ ಹುಲಿಯನ್ನು ಕಂಡು ಗಾಬರಿಯಾದನು. ಆಗ ಸ್ವಾಮಿಯು ವರು ಅವನಿಗೆ ಮಲ್ಲಪ್ಪ ಅವು ನಮ್ಮಂತೆ ಪ್ರಾಣಿಗಳು ಹೆದರುವ ಕಾರಣವಿಲ್ಲ ವೆಂದು ಸಂತೈಸಿದರು.

ಅಲ್ಲಿಂದ ಮಹಾಸ್ವಾಮಿಯುವರು ಧಾರವಾಡ ತಾಲೂಕ ಪೈಕಿ ತಡ ಕೊಡ ಎಂಬ ಗ್ರಾಮದಲ್ಲಿ ನರಶಿಂಹಭಟ್ಟರ ಮನೆಯಲ್ಲಿ ವಾಸಮಾಡಲಾ ರಂಭಿಸಿದರು. ಅಲ್ಲಿ ಕೃಷ್ಣಾಚಾರ್ಯ, ಶಂಗಾಚಾರ್ಯ, ಮೊದಲಾದವ ರೊಡನೆ ಅನೇಕ ರೀತಿಯಿಂದ ಶಾಸ್ತ್ರ ಪುರಾಣಗಳನ್ನು ಚರ್ಚಿಸಲಾರಂಭಿಸಿ ದರು. ಹೀಗೆ ಇರುವಾಗ ಒಂದು ದಿವಸ ನರಶಿಂಹಾಚಾರ್ಯರ ಮನೆಯಲ್ಲಿ ಭೋಜನಪ್ರಸ್ತ ಏರ್ಪಡಿಸಿದ್ದರು. ಆ ದಿವಸ ಸಕಲ ಬ್ರಾಹ್ಮಣರಿಗೂ ಆಮಂತ್ರ ಣವನ್ನು ಕೊಟ್ಟರು. ಅದರಲ್ಲಿ ಕೆಲವು ಜನರು ಕೂಡಿ ಮಹಾಸ್ವಾಮಿಯು ವರು ಎಲ್ಲ ಜಾತಿಯುವರಲ್ಲಿಯೂ ಬಳಿಕೆ ಮಾಡುತ್ತಿದ್ದರೆಂದು ಸುದ್ದಿಯನ್ನು ಹಬ್ಬಿಸಿ ಸ್ವಾಮಿಯುವರನ್ನು ಸಹಪಂಕ್ತಿ ಭೋಜನಕ್ಕೆ ಕರೆಯುಬಾರದೆಂದು ನಿಶ್ಚಯಿಸಿದ್ದರು. ಸಕಲವ್ಯಾಪಿಯಾದ ಶಿವನಿಗೆ ಇದು ತಿಳಿಯಿತು. ಆದರೂ ಸ್ವಾಮಿಯುವರು ಮೌನದಿಂದಿದ್ದರು. ಆಗ ನರಶಿಂಹಭಟ್ಟರು ಅಡಿಗೆಯಾಗಿ ದೆಯೋ ಇಲ್ಲವೋ ಎಂಬುದನ್ನು ನೋಡಲಿಕ್ಕೆ ಒಳಗೆ ಹೋದರು. ಹೋಳಿ ಗೆಯ ರಾಶಿಯು ಮೇಲೆ ಕುರಿ ತಲೆ ಇಟ್ಟಂತೆ ಕಂಡಿತು. ಆಗ ಭಟ್ಟರು ಘಾತ ವಾಯಿತೆಂದು ಮಹಾಸ್ವಾಮಿಯುವರಿದ್ದೆಡೆಗೆ ಬಂದು ನಡೆದ ಸಂಗತಿಯನ್ನು ಸ್ವಾಮಿಯುವರಿಗೆ ನಿವೇದಿಸಿ ಕ್ಷಮೆಬೇಡಿದರು. ಆಗ ಸ್ವಾಮಿಗಳವರು ನಕ್ಕು ಭಟ್ಟರೇ ಘಾಬರಿಯಾಗಬೇಡರಿ ಬಾಳೆಯ ಹಣ್ಣಿನ ಹಣಿಗಿಯಾಗಿದ್ದೀತು ನೋಡಿರಿ ಎಂದು ಹೇಳಿ ಕಳುಹಿಸಲು ಎಜಮಾನನು ಬಂದು ನೋಡಲಾಗಿ ಸ್ವಾಮಿಯುವರು ಹೇಳಿದ್ದು ನಿಜವಾಗಿತ್ತು. ಆಗ ಯಜಮಾನನು ಸ್ವಾಮಿಯು

ವರು ದುರಾಭಿಮಾನಿಗಳ ಕಣ್ಣಿಗೆ ಕುರಿ ತಲೆಯಂತೆಯೂ, ಸುಜನರ ಕಣ್ಣಿಗೆ ಬಾಳೆಯ ಹಣ್ಣಿನ ಹಣಿಗೆಯಂತೆಯೂ ಬಾಸವಾಗುವದುಯೆಂದು ನಿಶ್ಚಯಿಸಿ ಸ್ವಾಮಿಯವರನ್ನು ಕರೆದುಕೊಂಡು ಸಹಪಂಕ್ತಿ ಭೋಜಮಾಡಿದನು. ಅದಕ್ಕಂತೆಯೇ ಮಹಾತ್ಮರಲ್ಲಿ ಕುಭಾವನೆಯನ್ನು ತಾಳುವವರ ಗತಿಯು ತಡಕೋಡ ಭಟ್ಟರಂತೆ ಪಶ್ಚಾತ್ತಾಪಕ್ಕೆ ಗುರಿಯಾಗುವರು.

ಈ ಪ್ರಕಾರ ಸ್ವಾಮಿಯವರು ತಡಕೋಡಿನಲ್ಲಿ ಕಾಲಕಳೆಯುತ್ತಿರುವಾಗ ಗರಗದ ಮೊರಬದ ಅದೃಶ್ಯಪ್ಪನವರು ಗರಗದ ಚೀರ್ಲ ಹಳ್ಳದ ಮೇಲೆ ತಮ್ಮ ಹೊಲದಲ್ಲಿ ಮಠಕಟ್ಟಿಸಿ ಸ್ವಾಮಿಯವರಿಗೆ ಗರಗಕ್ಕೆ ದಯಮಾಡಿಸಲು ಬಿನ್ನಯಿಸಿಕೊಂಡರು ಅದೃಶ್ಯಪ್ಪನವರ ಮಾತಿಗೆ ಮಾನಕೊಟ್ಟು ಗರಗಕ್ಕೆ ದಯಮಾಡಿಸಿದರು. ಅಲ್ಲಿ ಅವರು ಬಂದ ಮೇಲೆ ಅವರಿಗೆ ದೇವೇಂದ್ರನ ಅಷ್ಟವಸುಗಳಂತೆ ಎಂಟು ಮಂದಿ ಕೇವಲ ಭಕ್ತರಾದರು.

೧. **ಮೊರಬದ ಅದೃಶ್ಯಪ್ಪನವರು**
೨. **ಷಣಗಿ ಘಂಟೆಪ್ಪನವರು**
೩. **ನರೀ ಶಿದ್ಲಿಂಗಪ್ಪನವರು**
೪. **ಎಲಿಗಾರ ಭೀಮಪ್ಪನವರು**
೫. **ಭಿಷ್ಟನಗೌಡರು**
೬. **ಪರಕಾಳಿ ಶಿವರುದ್ರಪ್ಪನವರು**
೭. **ಹುಬ್ಬಳ್ಳಿ ಮಾರುದ್ರಪ್ಪನವರು**
೮. **ಗುಡ್ಡದ ವೀರಭದ್ರಪ್ಪನವರು**

ಈ ಭಕ್ತರಲ್ಲದೆ ಅವರ ಕೃಪಾಛತ್ರಕ್ಕೆ ಪಾತ್ರರಾದ ಶ್ರೀಮಾನ್ ನಿರಂಜನ ಕುಮಾರ ಸ್ವಾಮಿಯವರು ಮಹಾಸ್ವಾಮಿಯವರ ಪ್ರತಿ ಮೂರ್ತಿಗಳೆಂದರೂ ಅಡ್ಡಿಯಿಲ್ಲ. ಈ ಮಹಾನುಭಾವರು ಸ್ವಾಮಿಯವರ ಕೃಪಾಪ್ರಸಾದದಿಂದ ಸಕಲಶಾಸ್ತ್ರ ಪಾರಂಗತರೂ, ಸರಸ್ವತೀ ಪುತ್ರರರೂ, ಆಗಿ ಕೀರ್ತಿಶ್ಯಾಲಿಗಳಾಗಿರುವರು. ಗುರುಕೃಪಾ ಪ್ರಸಾದಕ್ಕೆ ಪಾತ್ರರಾದ ಇವರಿಂದಲೇ ಈಗಲಾದರೂ

ಮಹಾಸ್ವಾಮಿಯವರ ಲೀಲೆಗಳನ್ನು ಕೇಳಿ ಆನಂದಪಡಬಹುದಲ್ಲದೇ ಅನ್ಯಥಾ ಸಾಧ್ಯವಿಲ್ಲಾ.

ಹೀಗೆ ಗರಗದ ಭಕ್ತರಿಂದ ಕೂಡಿದ ಮಹಾಸ್ವಾಮಿಯವರು ಕೆಲದಿನ ಕಾಲಕಳೆದ ಮೇಲೆ ನಿಚ್ಚಣಿಕೆಯಿಂದ ಮಾಳಶೆಟ್ಟಿ ಶಿವಲಿಂಗಪ್ಪ ಶಿವಮೂರ್ತಿ ಶಿವಲಿಂಗಯ್ಯ, ಪಟ್ಟೇದ ಪಾಟೀ ಗುರುಬಸಪ್ಪ, ದಳವಾಯಿ ಬೈಲಪ್ಪ, ಗಿರಿಜಪ್ಪನವರ ತಮ್ಮಪ್ಪ, ಮುಂತಾದವರು ಮಹಾಸ್ವಾಮಿಯವರನ್ನು ಕರೆಯಲಿಕ್ಕೆ ಬಂದರು. ಅದಕ್ಕೆ ಸ್ವಾಮಿಯವರು ಮಠ ಕಟ್ಟಿಸಿ ಕರಿಯಲಿಕ್ಕೆ ಬನ್ನಿರಿ ಎಂದು ಹೇಳಲಾಗಿ ಅವರು ತಮ್ಮೂರಿಗೆ ಹೋದರು. ಆ ಮೇಲೆ ನೇಗಿನಹಾಳದ ರಾಮನಗೌಡರು ಮತ್ತು ಆ ಊರ ದೈವದವರು ಮಠಕಟ್ಟಿಸಿ ಸ್ವಾಮಿಯವರನ್ನು ಕರೆಯಲಿಕ್ಕೆ ಬಂದರು. ಅವರ ಮಾತಿಗೆ ಸ್ವಾಮಿಯವರು ಮಾನವಿತ್ತು ನೇಗಿನಹಾಳಕ್ಕೆ ಹೋದರು. ಅಲ್ಲಿಂದ ಸದ್ಭಕ್ತರಿಂದ ಸೇವೆಕೈಕೊಳ್ಳುತ್ತ ಕೆಲಕಾಲ ಕಳೆದರು. ಅಲ್ಲಿ ಅವರು ಒಂದು ಹಣ್ಣುಮಗಳನ್ನು ಜೋಪಾನ ಮಾಡಿದರು.

ಅಷ್ಟರಲ್ಲಿ ನಿಚ್ಚಣಿಕೆಯವರು ಮಠಕಟ್ಟಿಸಿ ಕರಿಯಲಿಕ್ಕೆ ಬರಲಾಗಿ ಮಹಾಸ್ವಾಮಿಯವರು ನಿಚ್ಚಣಿಕೆಗೆ ಬಂದರು. ಅಲ್ಲಿ ಸದ್ಭಕ್ತರಿಂದ ಸೇವೆ ಕೈಕೊಳ್ಳುತ್ತ ದಿನಾಲು ಮಹಾಸ್ವಾಮಿಯವರು ಸ್ನಾನಭೋಜನಾದಿಗಳಿಂದ ತೃಪ್ತಿಗೊಳ್ಳುತ್ತ ಆನಂದದಿಂದ ಕಾಲಕಳೆಯಲಾರಂಭಿಸಿದರು. ಹೀಗಿರುವಾಗ ಒಂದು ದಿವಸ ಒಬ್ಬ ದೇಶಭಕ್ತನು ಮಹಾಸ್ವಾಮಿಯವರಿದ್ದೆಡೆಗೆ ಬಂದು ಕಾಯಿ ಕರ್ಪುರ ಇಟ್ಟು ನಮಸ್ಕರಿಸಿ ನಿಂತುಕೊಂಡನು. ಆಗ ಮಹಾಸ್ವಾಮಿಯವರು ನೀನು ಯಾರೆಂದು ಕೇಳಲು ಅವನು ತನ್ನ ಹೆಸರನ್ನು ಹೇಳಿ ದರ್ಶನಕ್ಕೆ ಬಂದಿರುವೆನೆಂದು ಭಿನ್ನವಿಸಿಕೊಂಡನು. ಆಗ ಮಹಾಸ್ವಾಮಿಯವರು ಅವನು ತಂದಿದ್ದ ಕಾಯಿಯನ್ನು ಒಡೆದು ಹಂಚಲಿಕ್ಕೆ ಹೇಳಿದರು. ಆಮೇಲೆ ಮತ್ತೊಂದು ಕಾಯಿ ತರಿಸಿ ಕರ್ಪುರಹಚ್ಚಿ ಕರ್ಪುರವನ್ನು ತಮ್ಮ ತಲೆಯ ಮೇಲಿಟ್ಟುಕೊಂಡು “ಅಜ್ಜಾ ಬಾಬಾರೇಕಿ ಜೈ” ಎಂದು ಗುರುವಿನ ನಾಮಸ್ಮರಣೆಯನ್ನು ಮಾಡಲು ಕರ್ಪುರವು ಧಗಧಗನೆ ಉರಿದು ತಣ್ಣಗಾಯಿತು. ಅದನ್ನು ಕಂಡು ಎಲ್ಲರೂ ಆಶ್ಚರ್ಯಚಕಿತರಾದರು ಅದಕ್ಕಾಗಿಯೇ ತಿಳಿದ

ವರು ಶರಣರ ಮಹಿಮೆಯನ್ನು ತಿಳಿಯಲು ನಮ್ಮಂಥ ನರಗುರಿಗಳಿಗೆ ಅಸಾಧ್ಯವೆಂದು ಹೇಳಿದ್ದಾರೆ

ಈ ರೀತಿ ಸ್ವಾಮಿಯವರು ನಿಚ್ಚಣಿಕೆಯಲ್ಲಿ ಕಾಲಕಳೆಯುವಾಗ್ಗೆ ದೇಗಲೋಳಿ ದೈವದವರು ಮಹಾಸ್ವಾಮಿಯವರಿಗೆ ತಮ್ಮ ಊರಿಗೆ ಬರಲು ಬಿನ್ನವಿಸಿಕೊಳ್ಳಲು ಅವರ ಇಚ್ಛೆಯಂತೆ ಸ್ವಾಮಿಯವರು ಅವರ ಊರಿಗೆ ಹೋದರು. ಅಲ್ಲಿರುವಾಗಲೇ ಮಹಾಸ್ವಾಮಿಯವರು ಶಂಕರಪ್ರಭು, ಚನಬಸವಾರ್ಯ, ರೆಂಬ ಇಬ್ಬರು ಮರಿಗಳನ್ನು ಜೋಪಾನ ಮಾಡಲಿಕ್ಕೆಂದು ಇಟ್ಟುಕೊಂಡರು. ಸ್ವಾಮಿಯವರು ಅಲ್ಲಿ ಬಹಳ ದಿವಸ ಉಳಿಯಲಿಲ್ಲಾ ಅಲ್ಲಿಂದ ಅವರು ನಿಚ್ಚಣಿಕೆಗೆ ಬಂದರು. ಅಲ್ಲಿರುವಾಗ ಮತ್ತೆ ಗರಗದ ಭಕ್ತಮಂಡಳಿಯವರು ಮಹಾಸ್ವಾಮಿಯವರನ್ನು ಕರೆ ುಲು ಬಂದರು.

ಆಗ ಸ್ವಾಮಿಯವರು ತಮ್ಮನ್ನು ಕರೆಯಲು ಬಂದ ನರಿಶಿದ್ದಿಂಗಪ್ಪ, ಹಣಗಿಗಂಟೆಪ್ಪ, ಎಲಿಗಾರಭೀಮಪ್ಪ, ಕುಬಸದ ವೀರಭದ್ರಪ್ಪನವರಿಗೆ ಭಕ್ತರೇ ನೀವು ಕರೆಯಲು ಬಂದಿರುವಿರಿ ಆದರೆ ಹಳ್ಳದ ಬಸವಣ್ಣನ ಗುಡಿಯ ಹತ್ತರ ಮಠ ಕಟ್ಟಿಸಿ ಕರೆಯಲಿಕ್ಕೆ ಬರ್ರಿ ಎಂದು ಹೇಳಿದರು. ಆದರಂತೆ ಆ ಭಕ್ತರು ತಿರುಗಿ ಬಂದು ಗುರುಗಳ ಹೇಳಿಕೆಯಂತೆ ಮಠಕಟ್ಟಿಸಿ ಸಕಲ ವೈಭವದಿಂದೊಡಗೂಡಿ ಸ್ವಾಮಿಯವರನ್ನು ಊರಿಗೆ ಕರೆದುಕೊಂಡು ಬಂದರು.

ಭರದಿ ಕರ್ನಾಟಕದಿ ಚರಿಸುತೆ
ಪರಮ ಗುರುತಾ ಸ್ಥಾಪಿಸಿದನಾಗ
ಗರಗದಾ ಗ್ರಾಮದೊಳು ನಿತ್ಯಮಠವನ್ನು

ವಾಚಕ ಮಹಾಶಯರೇ ಇಲ್ಲಿಯವರೆಗೆ ನಾವು ಸ್ವಾಮಿಯವರ ಕೂಡ ಅವರು ಹೋದಲ್ಲೆಲ್ಲ ಸಂಚರಿಸಿ ಅವರ ಪವಾಡಗಳನ್ನು ನೋಡಿದೆವು. ಇನ್ನು ಮಾತ್ರ ನಾವು ಅಷ್ಟೊಂದು ದಣಿಯುವ ಕಾರಣವಿಲ್ಲ. ಸ್ವಾಮಿಯವರು ಸಕಲ ಹಿಂದುಸ್ತಾನ ಸಂಚರಿಸಿ ತಮಗೆ ಹಿತವಾದ ಕರ್ನಾಟಕ ಗ್ರಾಮದಲ್ಲಿ ಅಲ್ಲಲ್ಲಿ ಮಠಕಟ್ಟಿ ಕಡೆಗೊಮ್ಮೆ ಆಜನ್ಮ ಪರಿಯಂತ ತಮ್ಮ ವಾಸಸ್ಥಾನವನ್ನು ಗರಗವನ್ನೇ ಮಾಡಿಕೊಂಡುಬಿಟ್ಟರು. ನೋಡಿ ವಾಚಕರೇ ತಮ್ಮ

ಜನ್ಮಸ್ಥಾನವನ್ನು ರಾಜವೈಭವವನ್ನು ಮಠಪಟ್ಟಾಧಿಕಾರವನ್ನು ಮರೆತ ಗುರುವು ತನ್ನ ಜನ್ಮ ನೀಗಲು ಯೋಗ್ಯಸ್ಥಾನವನ್ನು ಹುಡುಕಿದರು. ಈ ಮಹಾಸ್ವಾಮಿಯವರು ಬಸವೇಶ ಗುಡಿಯ ಹತ್ತಿರ ಮಠಕಟ್ಟಿಸಿ ಅಲ್ಲಿಯೇ ನಿರಂತರವಾಸ ಕೈಕೊಂಡು ಬಂದ ಸದ್ಭಕ್ತಮಂಡಳಿಯನ್ನು ವಚನಾಶೀರ್ವಾದ ಗಳಿಂದ ಉದ್ಧರಿಸುತ್ತ ನಡೆದರು ಮೊದಲು ಅವರು ಮಠಕಟ್ಟಿಸಿದ ಸ್ಥಾನವು ಬ್ರಹ್ಮರಾಕ್ಷಸನಿಂದ ಪೀಡಿತ ಸಕಲ ಜನ ಭಯಪ್ರದಾಯಕ ಸ್ಥಳವಾಗಿತ್ತು. ಸ್ವಾಮಿಯವರು ಅಲ್ಲಿ ಕಾಲಿಟ್ಟೊಡನೆಯೇ ಆ ಬ್ರಹ್ಮರಾಕ್ಷಸನನ್ನು ಉದ್ಧಾರ ಮಾಡಿ ಅದಕ್ಕೆ "ತಮ್ಮಾ ನಾನಿದ್ದ ಸ್ಥಾನದಲ್ಲಿ ನೀನಿರಬಾರದು ಹೋಗು" ಎಂದು ಹೇಳಲು ಎಲ್ಲರೂ ಆಶ್ಚರ್ಯಚಕಿತರಾಗುವಂತೆ ಅಲ್ಲಿದ್ದ ಆಲದ ಗಿಡದ ಟೊಂಗೆಯು ಭೀಕರ ಸಪ್ಪಳದಿಂದ ಮುರಿದು ಬಿದ್ದಿತು. ಅಂದಿನಿಂದ ಅಲ್ಲಿಯ ಬ್ರಹ್ಮರಾಕ್ಷಸನ ಭಾದೆ ಕಡಿಮೆಯಾಯಿತು. ನೋಡಿ ವಾಚಕರೇ ಜಗತ್ತಿನ ಚರಾಚರ ವಸ್ತುಗಳು ಸಹ ಶರಣಾಧೀನವೆಂಬ ಮಾತು ಮೇಲಿನ ಉದಾಹರ ಣೆಯ ಮೇಲಿಂದ ಸಿದ್ಧವಾಗುತ್ತದೆ. ಮಹಾಸ್ವಾಮಿಯವರು ಗರಗದಲ್ಲಿ ವಾಸಮಾಡಲಿಕ್ಕೆ ಹತ್ತಿದ ನಂತರ ಅವರಿಗೆ ಇಬ್ಬರು ಕೇವಲ ಶಿಷ್ಯರಾದರು. ಅವರಲ್ಲಿ ಅತಿ ಪ್ರೀತಿಯ ಭಕ್ತನೆಂದರೆ ಹಣಗಿಯ ಗಂಟೆಪ್ಪನವರು. ಈ ಮಹಾನುಭಾವರು ಸದಾವಕಾಲದಲ್ಲಿಯೂ ಮಡಿವಾಳಸ್ವಾಮಿಯವರ ಸೇವೆ ಯನ್ನು ಮಾಡುತ್ತಾ ಆ ಜನ್ಮ ಪರಿಯಂತ ಸತ್ಪುರುಷರ ಸಮಾಗಮನ ದಿಂದ ಜನ್ಮವನ್ನು ಸಾರ್ಥಕ ಮಾಡಿಕೊಂಡರು.

ಮಹಾಸ್ವಾಮಿಯವರು ಗರಗದಲ್ಲಿ ವಾಸಮಾಡಲಿಕ್ಕೆ ಹತ್ತಿದ ನಂತರ ತಾವು ಮಾಡಿದ ಅನೇಕ ಪವಾಡಗಳನ್ನು ಮತ್ತು ತಾವು ಅನುಭವಿಸಿದ ಅನೇಕ ಘಟನೆಗಳನ್ನು ತಮ್ಮ ಸದ್ಭಕ್ತರ ಮುಂದೆ ಹೇಳುತ್ತಿದ್ದರು. ಅವುಗಳಲ್ಲಿ ಪ್ರತ್ಯಕ್ಷ ಗರಗದಲ್ಲಿ ಭಕ್ತರ ಮುಂದೆ ನಡೆದ ಘಟನೆಗಳು ಅನೇಕ ಉಂಟು. ಅವುಗಳಲ್ಲಿ ಯಾವದು ಮೊದಲು ಯಾವದು ನಂತರ ಎಂಬುದನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಮಹಾಸ್ವಾಮಿಯವರು ತಮ್ಮ ಮನಸ್ಸಿನ ಆನಂದಾ ತಿರೇಕದಲ್ಲಿ ಹಿಂದೆ ಸಂಭವಿಸಿದ ಘಟನೆಗಳನ್ನು ಹೇಳುತ್ತಿದ್ದರಲ್ಲದೇ ಸದಾವ ಕಾಲದಲ್ಲಿಯೂ ಹೇಳುತ್ತಿರಲಿಲ್ಲಾ. ಒಂದು ದಿನ ನೇಗಿನಹಾಳದ ಶ್ರೀ ಶಿವ ಲಿಂಗಮರಿದೇವರು, ನೇಗಿನಹಾಳದ ರಾಮನಗೌಡ್ರು, ಗಗನಾಚಾರ್ಯರು

ಚನ್ನಬಸವ ಶಾಸ್ತ್ರಿಯವರು, ಪ್ರತಿ ವರ್ಷಕ್ಕೊಮ್ಮೆ ಬಂದು ಸ್ವಾಮಿಯವರ ದರ್ಶನ ತೆಗೆದುಕೊಂಡು ನಾಲ್ಕೆಂಟು ದಿವಸ ಇದ್ದು ಶಾಸ್ತ್ರವಿಚಾರಗಳನ್ನು ತರ್ಕಮಾಡಿ ತೃಪ್ತಿಗೊಂಡು ಹೋಗುತ್ತಿದ್ದರು. ಹೀಗೆ ಮಹಾಸ್ವಾಮಿಯವರು ಗರಗದಲ್ಲಿ ಸುಖದಿಂದ ಕಾಲಕಳೆಯಲಾರಂಭಿಸಿದರು. ಮಹಾಸ್ವಾಮಿಯವರ ಮಠದ ಹತ್ತರಿರುವ ತೂಪರಿಯ ಹಳ್ಳಕ್ಕೆ ಚಿಕ್ಕದೊಂದು ಘಾಟವನ್ನು ಕಟ್ಟಿಸಿ ಕಾಶಿಯ ಗಂಗಾ ನದಿಯ ಘಾಟದಲ್ಲಿ ಸ್ನಾನ ಮಾಡಿದಷ್ಟು ಸಂತೋಷ ಪಡೆಯುತ್ತಿದ್ದರು. ನೋಡಿ ಮಹಾಶಯರೇ ಮಹಾತ್ಮರಿಗೆ ಜಗತ್ತೆಲ್ಲ ತೀರ್ಥವು

ಒಂದು ದಿವಸ ಅಗ್ರಗಣ್ಯ ಭಕ್ತಶ್ರೇಷ್ಠರಲ್ಲಿ ಅಗ್ರಗಣ್ಯನಾದ ನೇಗಿನಹಾಳದ ರಾಮನಗೌಡ್ರು ಅವರ ಪತ್ನಿಯಾದ ಬಿಂದವ್ವನವರು ಮತ್ತು ಅಲ್ಲಿಯ ದೇಸಾಯರು ಬಂದು ಮಹಾಸ್ವಾಮಿಯವರಿಗೆ ಕೈಮುಗಿದು ರಾಮನಗೌಡರಿಗೆ ಪುರುಷತ್ವವಿಲ್ಲೆಂದು ಹೇಳಲಾಗಿ ಮಹಾಸ್ವಾಮಿಯವರು ಒಂದು ನೂರು ರೂಪಾಯಿಗಳನ್ನು ತೆಗೆದುಕೊಂಡು ಗಂಡಹೆಂಡಿರನ್ನು ಕರೆದುಕೊಂಡು ಬನ್ನಿರೆಂದು ಹೇಳಲು ಅದರಂತೆ ಸಕಲಸಾಮಗ್ರಿಗಳೊಂದಿಗೆ ಅವರು ಬಂದು ಸ್ವಾಮಿಯವರ ಮುಂದೆ ಇಟ್ಟು ನಮಸ್ಕರಿಸಲು ಸ್ವಾಮಿಯವರು ಸಕಲರಿಗೂ ಊಟದ ವ್ಯವಸ್ಥೆಯನ್ನು ಮಾಡಿಸಿ ಗಂಡಹೆಂಡಿರನ್ನು ಘಾಟದಲ್ಲಿ ಜಳಕ ಮಾಡಿಸಿ ಅವರಿಗೆ ಉಣಬಡಿಸಿ ಗಂಡಹೆಂಡಿರಿಬ್ಬರನ್ನು ತಮ್ಮ ಕುದುರೆಯ ಮನೆಯಲ್ಲಿ ಮಲಗಲಿಕ್ಕೆ ಆಜ್ಞೆಕೊಟ್ಟರು. ಮರುದಿನ ಮುಂಜಾನೆ ಸ್ವಾಮಿಯವರು ರಾಮನಗೌಡರ ಹೆಂಡತಿಯನ್ನು ಕರೆದು ಬಿಂದವ್ವಾ ನಿನ್ನ ಗಂಡನ ಪ್ರಕರ್ತಿಯು ಹೇಗೆ ಅದೆ ಎಂದು ಕೇಳಲು ಒಳ್ಳೇಯದಾಗಿದೆ ಬುದ್ದೀ ಎಂದು ಉತ್ತರ ಕೊಟ್ಟಳು. ಆಗ ಸ್ವಾಮಿಯವರು ಸಕಲರಿಗೂ ಹೋಗಲು ಅಪ್ಪಣೆಯನ್ನು ಕೊಟ್ಟರು. ಆನಂತರ ರಾಮನಗೌಡರು ಸದಾವಕಾಲದಲ್ಲಿಯೂ ಗುರುಸೇವೆಯಲ್ಲಿ ಕಾಲಕಳೆಯಲು ಮನಸ್ಸುಮಾಡಿ ತನ್ನ ಜನ್ಮದ ಹೆಚ್ಚಿನ ಕಾಲ ಗರಗದಲ್ಲಿಯೇ ಕಳೆದು ಅಲ್ಲಿಯೇ ದೇಹವಿಟ್ಟರು. ಈಗ ಮಹಾಸ್ವಾಮಿಯವರ ಸಮಾಧಿಯನ್ನು ನೋಡಲಿಕ್ಕೆ ಹೋದ ಜನರು ತಮ್ಮ ಪ್ರೀತಿಯ ಭಕ್ತ ರಾಮನಗೌಡರ ಸಮಾಧಿಯನ್ನು ತಮ್ಮ ಎದುರಿನಲ್ಲಿಯೇ ಮಾಡಿಸಿಕೊಂಡ

ದ್ದನ್ನು ನೋಡಬಹುದು. ದೇವನು ಭಕ್ತವತ್ಸಲನೆಂಬ ಮಾತು ಈ ಉದಾಹರಣೆಯಿಂದ ತಾನಾಗಿಯೇ ತಿಳಿಯುತ್ತದೆ.

ಈ ಪ್ರಕಾರ ಮಹಾಸ್ವಾಮಿಯವರು ಗರಗದಲ್ಲಿಯೇ ಹೆಚ್ಚುಕಾಲ ಕಳೆಯಲಾರಂಭಿಸಿದರು ಅಲ್ಲಿರುವಾಗ ಕರ್ಜಿಗೆಯ ನಿಂಗವ್ವನೆಂಬ ಒಬ್ಬ ಮೂಢ ಭಕ್ತಳು ಒಂದು ಎಮ್ಮೆಯ ಮೇಲಿಂದಾ ಉಪಜೀವನವಾಗುತ್ತಿದ್ದಳು. ಆ ಎಮ್ಮೆಗೆ ಯಾರೋ ದುಷ್ಟರು ಹಿಂಡದಂತೆ ಮಾಡಿಸಿದರು. ಆಗ ಸ್ವಾಮಿಯವರಲ್ಲಿ ಅತಿ ವಿಶ್ವಾಸವಿಟ್ಟ ಆ ಹೆಣ್ಣುಮಗಳು ಮಡಿವಾಳಜ್ಜಾ ನನ್ನ ಎಮ್ಮೆಯು ಹಿಂಡಿದರೆ ನಿನಗೆ ಒಂದು ದಿನದ ಹಾಲು ಕೊಡುತ್ತೇನೆ ಎಂದು ಬೇಡಿಕೊಂಡಳು. ಸರ್ವಾಂತರ್ಯಾಮಿಯಾದ ಶಿವನು ಭಕ್ತಳ ಕೂಗಿಗೆ ಮಾನವಿತ್ತು ಅವಳ ಎಮ್ಮೆಯು ಹಿಂಡುವಂತೆ ಮಾಡಿದನು. ಮುಂದೆ ತಾನು ಸುಖದಿಂದಾ ಕಾಲಕಳೆಯುವಾಗ ಆ ನಿಂಗಮ್ಮನು ಗುರುವನ್ನು ಮರೆತಳು. ಆದರೆ ಮಹಾಸ್ವಾಮಿಯು ಅವಳನ್ನು ಮರೆಯಲಿಲ್ಲಾ ಕೆಲದಿನಗಳ ಮೇಲೆ ಮಹಾಸ್ವಾಮಿಯವರು ಸಂಚರಿಸುತ್ತಾ ಕರ್ಜಿಗೆಗೆ ಒಂದು ನಿಂಗಮ್ಮನ ಮನೆಗೆ ಬಂದಿಳಿದರು. ಆಗ ಗುರು ಬಂದದ್ದನ್ನು ನೋಡಿ ನಿಂಗಮ್ಮನಿಗೆ ಸಂತೋಷವಾಯಿತು. ಆಗ ಅವಳು ಗುರುವಿನ ಕ್ಷೇಮಸಮಾಚಾರವನ್ನು ಕೇಳಲಾರಂಭಿಸಿದಳು. ಸಕಲ ಕ್ಷೇಮಸಮಾಚಾರವಾದ ನಂತರ ಅವಳು ತನ್ನ ಎಮ್ಮೆಯನ್ನು ಹಿಂಡಿಕೊಂಡು ಹಾಲಿನ ಪಾತ್ರೆಯನ್ನು ಕಾಯಲಿಕ್ಕೆ ಇಟ್ಟಳು. ಭಕ್ತರ ಮನಸ್ಸನ್ನು ಪರೀಕ್ಷೆ ಮಾಡುವದಕ್ಕಾಗಿ ಪರಶಿವನು ಟೊಂಕಕಟ್ಟಿದ್ದನೆಂದು ಪಾಮರರಿಗೆ ಹೇಗೆ ತಾನೇ ತಿಳಿಯಬೇಕು? ನಿಂಗವ್ವನ ಅಂತರಂಗವನ್ನು ತಿಳಿದು ಮಹಾಸ್ವಾಮಿಯವರು ಹಾಲು ಸಂಪೂರ್ಣ ಕೆನೆಗಟ್ಟಿದ ಹಾಗೆ ಆಗಲಿ ಎಂದು ಮತ್ತಾ ನಿಂಗಮ್ಮನಿಗೆ ನನ್ನ ಒಪ್ಪತ್ತಿನ ಹಾಲು ಕೊಡು ಎಂದು ಬೇಡಿದರು ಆಗಲಿ ಎಂದು ಆಗಅವಳು ಮನಸ್ಸಿನಲ್ಲಿ ಮರಮರನೆ ಮರಗುತ್ತ ಹಾಲಿನ ಪಾತ್ರೆಯನ್ನು ತಂದು ಗುರುವಿನ ಪಾತ್ರೆಯಲ್ಲಿ ಸುರುವುವಾಗ ಅದರ ಮೇಲಿನ ಕೆನೆಯು ಮಹಾಸ್ವಾಮಿಯವರ ಪಾತ್ರೆಯಲ್ಲಿ ಬಿದ್ದಿತು. ಆಗ ಅವಳು ತನ್ನ ಬಾಯಿಂದಾ ಬ್ ಬ್ ಬ್ ಎಂದಳು. ಆಗ ಸ್ವಾಮಿಯವರು ನಿಂಗಮ್ಮನನ್ನು ಹೊಡೆದುಏನೇ ಎನ್ನಗುರುವೇ ಎಂದು ಕೇಳಲು ನಿಂಗಮ್ಮಾ ನೀನು ನನಗೆ ಹಾಲನ್ನಷ್ಟೇ ಕೊಡುತ್ತೇನೆಂದು ಹೇಳಿದ್ದಿ ಅಲ್ಲದೇ ಈ ಬ್ ಬ್ ಬ್ ಕೊಡುತ್ತೇ

ನೆಂದು ಹೇಳಿದ್ದಿಲ್ಲ ಎನ್ನಲು ಆ ನಿಂಗಮ್ಮನು ಗುರುವಿನ ಭಾವವನ್ನು ತಿಳಿದು ಪಶ್ಚಾತ್ತಾಪಪಟ್ಟು ಗುರುವಿಗೆ ಶರಣು ಬಂದಳು. ಆಗ ಗುರುವು ಅವಳ ಭಕ್ತಿಗೆ ಮೆಚ್ಚಿ ಅವಳ ಎಮ್ಮೆಯನ್ನು ಚಪ್ಪರಿಸಿ ತಾಯಿಯೇ ಈ ನಿಂಗಮ್ಮನು ಜನ್ಮ ದಿಂದಿರುವವರೆಗೆ ನೀನು ಕಟ್ಟುವದು ಈಯುವದು ಬೇಡಾ ಪ್ರತಿನಿತ್ಯ ಇವಳ ಉಪಜೀವನವನ್ನು ಕೊಡುತ್ತಾ ಸಾಗಿಸು ಎಂದು ಹೀಗೆ ಆ ಭಕ್ತಳಿಗೆ ವರವ ನ್ನಿತ್ತು ಗಗಗಕ್ಕೆ ತಿರುಗಿದರು. ಮುಂದೆ ಆ ಎಮ್ಮೆಯು ನಿಂಗಮ್ಮನ ಜನ್ಮವಿರು ವವರೆಗೆ ಅವಳ ಉಪಜೀವನವನ್ನು ಸಾಗಿಸಿ ಅವಳು ಜನ್ಮನೀಗಿದ ಮೂರನೇಯ ದಿವಸಕ್ಕೆ ಜನ್ಮ ನೀಗಿತು. ಒಮ್ಮೆ ಧಾರವಾಡದಿಂದಾ ಒಬ್ಬ ಕ್ರಿಶ್ಚನ್ನರವನು ಮಹಾಸ್ವಾಮಿಯವರ ಹತ್ತರ ದರ್ಶನಕ್ಕಾಗಿ ಬಂದು ತಮ್ಮ ದೇವರು ಹೆಚ್ಚು ತಮ್ಮ ಧರ್ಮವು ಅತಿಶ್ರೇಷ್ಠವಾದದ್ದು, ತಮ್ಮ ದೇವರು ಲೋಕ ವನ್ನು ರಕ್ಷಿಸುತ್ತಾನೆಯೆಂದು ಹೇಳಲಾರಂಭಿಸಿದನು. ಆಗ ಸ್ವಾಮಿಯವರು ನಿಮ್ಮ ದೇವರು ನಮ್ಮ ದೇವರ ಮಲವನ್ನು ತಿನ್ನುತ್ತಾನೆಯೆಂದು ಹೇಳಲು ನಿಮ್ಮ ದೇವರು ಯಾರೆಂದು ಆ ಪಾದ್ರಿಯು ಪ್ರಶ್ನಿಸಿದನು. ಅದಕ್ಕೆ ಸ್ವಾಮಿ ಯವರು ನಮ್ಮ ದೇವರು ಬೀಸುಕಲ್ಲು ವಳಕಲ್ಲು ಎಂದು ಹೇಳಿದರು. ಅದಕ್ಕೆ ಪಾದ್ರಿಯು ನಿರುತ್ತರನಾದನು. ಒಂದು ದಿವಸ ಗುರ್ಲಹೊಸೂರಿನ ಪಡೆ ಯಚ್ಚಿನ ರುದ್ರಪ್ಪನು ತನ್ನ ಮನೆತನದವರನ್ನು ಕೂಡಿಕೊಂಡು ಗರಗಕ್ಕೆ ಬಂದು ಮೃಷ್ಟಾನ್ನ ಭೋಜನವನ್ನು ತಯಾರಿಸಿ ಸ್ವಾಮಿಯವರಿಗೆ ನೈವಿದ್ಯ ವನ್ನರ್ಪಿಸಿದನು. ಊಟ-ಉಡಿಗೆಗಳನ್ನು ತೀರಿಸಿಕೊಂಡು ಸ್ವಾಮಿಯವರ ಕೂಡ ಮಾತನಾಡುತ್ತ ಕುಳಿತನು. ಆಗ ಸುಮಾರು ಸಂಜೆಯ ನಾಲ್ಕು ಘಂಟೆಯಾಗಿರಬಹುದು. ಆಗ ಸ್ವಾಮಿಯವರು ರುದ್ರಾ ನೀನು ಈಗಿಂದೀ ಗಲೇ ಊರಿಗೆ ಹೋಗಬೇಕು ಎಂದು ಹೇಳಿದರು ಅಂದು ತನ್ನ ಹೆಂಡರ ಮಕ್ಕಳೊಂದಿಗೆ ವಿಶ್ರಾಂತಿಯನ್ನು ಹೊಂದಬೇಕೆಂದು ಬಂದ ರುದ್ರಪ್ಪನ ಆಶೆ ಯಲ್ಲಾ ಹರಿದುಹೋಯಿತು. ಆಗ ಆಶ್ಚರ್ಯಚಕಿತನಾದ ರುದ್ರಪ್ಪನು ಸ್ವಾಮಿಯ ಆಜ್ಞೆಯನ್ನು ಮೀರದೆ ತನ್ನ ಹೆಂಡಿರು ಮಕ್ಕಳೊಂದಿಗೆ ತನ್ನ ಊರಿಗೆ ಹೊರಟನು. ಅವನು ಊರಿಗೆ ಮುಟ್ಟಿದಾಗ ೫-೬ ತಾಸು ರಾತ್ರಿ ಯಾಗಿರಬಹುದು. ಅವನು ತನ್ನ ಮನೆಗೆ ಮುಟ್ಟಿ ಬಾಗಿಲವನ್ನು ತೆಗೆದು ಒಳಗೆ ಹೋಗುವದರೊಳಗಾಗಿ ಅವನ ಮನೆಗೆ ಕನ್ನ ಹಾಕಿದ್ದ ಕಳ್ಳರು ಇವನ

ಧ್ವನಿ ಕೇಳಿ ಓಡಿಹೋದರು. ರುದ್ರಪ್ಪನು ಅದನ್ನೆಲ್ಲವನ್ನು ನೋಡಿ ಮಹಾ ಸ್ವಾಮಿಯವರ ಲೀಲೆಯನ್ನು ಕೊಂಡಾಡುತ್ತ ಸ್ವಾಮಿಯು ನನ್ನನ್ನು ಕಾಯ್ದು ಕೊಂಡನೆಂದು ಹಾಡಿ ಹರಸಿದನು. ತನ್ನ ಶಿರಿಯ ಉಳುವಿಗಾಗಿ ರುದ್ರಪ್ಪನು ಮತ್ತೊಮ್ಮೆ ಗರಗಕ್ಕೆ ಬಂದು ಸ್ವಾಮಿಯವರಿಗೆ ವೃತ್ತಾಂತವನ್ನು ವಿವರಿಸಿ ಸಕಲ ಮಂಡಳಿಗೂ ಮತ್ತೊಮ್ಮೆ ಅನ್ನ ಸಂತರ್ಪಣೆ ಮಾಡಿಸಿ ಗುರುವಿನ ಆಶೀರ್ವಾದವನ್ನು ತೆಗೆದುಕೊಂಡು ಊರಿಗೆ ಹೋದನು. ಒಂದು ದಿವಸ ಸ್ವಾಮಿಯವರು ಕುಳಿತಾಗ ತಮ್ಮ ಸದ್ಭಕ್ತ ಮಂಡಳಿಗೆ ವಿಜಾಪುರದ ಹತ್ತರ ಒಂದು ಹಳ್ಳಿಯಲ್ಲಿ ನಡೆದ ಒಂದು ವೃತ್ತಾಂತವನ್ನು ಹೇಳಿದರು ಸ್ವಾಮಿ ಯವರು ಸಂಚಾರ ಮಾಡುತ್ತ ಒಂದು ಪೇರಲ ತೋಟದಲ್ಲಿ ಇಳಿದುಕೊಂಡರು ಅವರಿಗೆ ಅತಿ ಹಸಿವೆಯಾಗಿತ್ತು. ಆಗ ಅವರು ತೋಟಿಗನನ್ನು ಮಹಾನು ಭಾವಾ, ಹಸಿವೆಯಾಗಿದೆ ತಿನ್ನಲಿಕ್ಕೆ ಹಣ್ಣುಗಳನ್ನು ಕೊಡು ಎಂದು ಕೇಳಿ ದಾಗ ಅದರಲ್ಲಿ ಏನಿದೆ ಸ್ವಾಮಿ ಶೆಗಣಿಯೇ, ತಿನ್ನಲಿಕ್ಕೆ ಬರುವಂತಿಲ್ಲ ಎಂದು ಉತ್ತರವಿತ್ತನು. ಆ ತೋಟದಲ್ಲಿ ಈಗಲಾದರೂ ಆಗುವ ಹಣ್ಣುಗಳು ಆ ತೋಟಿಗನ ಬಾಯಿಂದ ಬಂದಂತೆ ಶೆಗಣಿಯೇ ಆಗಿರುತ್ತವೆ. ನೋಡಿ ವಾಚಕ ಮಹಾಶಯರೇ ಸೃಷ್ಟಿಸ್ಥಿತಿಲಯಗಳನ್ನು ಕೂಡಾ ತಮ್ಮ ಯೋಗ ಬಲದಿಂದಾ ತಮ್ಮ ಆಧೀನದಲ್ಲಿ ಇಟ್ಟುಕೊಂಡ ಜಗತ್ತಿನ ಚರಾಚರ ವಸ್ತು ಗಳಲ್ಲಿ ವ್ಯಾಪಕತ್ವವನ್ನು ಬೆಳಿಸಿ ಸರ್ವಾಂತರ್ಯಾಮಿ ಸರ್ವಶ್ರೇಷ್ಠ ಶಿವನಿ ಗಿಂತಲೂ ಯೋಗನಿಷ್ಠೆಯ ಬ್ರಹ್ಮಚಾರಿ ಯೊಗೀಶ್ವರನ ಶಕ್ತಿಯು ಮಿಗಿಲಾ ದದ್ದೆಂದು ಮೇಲಿನ ಉದಾಹರಣೆಗಳಿಂದ ಸಿದ್ಧಮಾಡಬಹುದು.

ಹಿಂದೆ ಹೇಳಿದಂತೆ ಮಹಾತ್ಮರ ಭಕ್ತರಲ್ಲಿ ಅಗ್ರಗಣ್ಯನೆಸಿದ ಮುದೇ ನೂರ ಕರಿಗೌಡ್ರು ಮಹಾಸ್ವಾಮಿಯವರ ಮುಂದೆ ಯಾವಾಗಲೂ ನಿಜಗುಣಿ ಶಿವಯೋಗಿಗಳ ತತ್ವಭೋದಕ ಪದಾರ್ಥಗಳನ್ನು ಹಾಡಿ ದಣಿಯುತ್ತಿದ್ದರು. ಆದರೆ ಕನ್ನಡ ಭಾಷೆಗೆ ಲಕ್ಷಕೊಡದ ಮಹಾಸ್ವಾಮಿಯವರು ಅವರ ಪದಗ ಳಿಗೆ ಮಹತ್ವ ಕೊಡುತ್ತಿದ್ದಿಲ್ಲ. ನಿಜಗುಣಿ ಶಿವಯೋಗಿಗಳ ಕೈವಲ್ಯವನ್ನೂ ತಮ್ಮ ಕೈಯಲ್ಲಿ ತಂಬೂರಿಯನ್ನೂ ತೆಗೆದುಕೊಂಡು ಹಾಡತೊಡಗಿದರು ಹಾಡುತ್ತಾ ಹಾಡುತ್ತಾ ಆನಂದಲಹರಿಯಲ್ಲಿ ಕರಿಗೌಡರು ಕುಣಿಯಲಾರಂಭಿ ಸಿದರು. ಅದನ್ನು ಕೇಳುತ್ತಿದ್ದ ಮಹಾಸ್ವಾಮಿಯವರು ಆ ಪದದ ಅರ್ಥವನ್ನು

ಪರಿಣಾಮುಗೊಳಿಸಿಕೊಂಡು ಅದೇ ಆನಂದದಲ್ಲಿ ಎದ್ದು ಕುಣಿಯುಲಾರಂಭಿಸಿದರು. ಎಂದೂ ಕನ್ನಡ ಸಂಸ್ಕೃತಿಯಲ್ಲಿ ಅಭಿಮಾನವಿಲ್ಲದ ಮಹಾಸ್ವಾಮಿಯವರಿಗೆ ಆದರಲ್ಲಿ ಮಹತ್ವವಿದೆಯೆಂದು ಅಭಿಮಾನ ಹುಟ್ಟಿತು. ಆಗ ಮಹಾಸ್ವಾಮಿಯುವರು ಕರಿಗೌಡಾ ಇಂದು ನೀನು ನನ್ನನ್ನು ಕುಣಿಸಿದೆಯೆಂದು ಅಂದರು.

ಒಮ್ಮೆ ಗರಗದಲ್ಲಿ ಕುಬಸದ ನಾಗಪ್ಪನ ಹೆಂಡತಿಯು ಪ್ರಸವ ಕಾಲಕ್ಕೆ ತ್ರಾಸು ಆಯಿತು. ಆಗ ನಾಗಪ್ಪನವರು ಮಹಾಸ್ವಾಮಿಯುವರ ಹತ್ತರ ಹೋಗಿ ನಮಸ್ಕರಿಸಿ ಕುಳಿತುಕೊಂಡರು. ಮತ್ತು ಸ್ವಾಮಿಯುವರ ಮುಂದೆ ನಡೆದ ವರ್ತಮಾನವನ್ನು ತಿಳಿಸಲಾಗಿ ಸ್ವಾಮಿಯುವರು ನಾಗಪ್ಪನವರಿಗೆ “ನಾಗಪ್ಪಾ ನನ್ನ ಈ ಲಂಗೋಟಿಯುನ್ನು ಒಗೆದುಕೊಂಡು ಬಾ” ಎಂದು ಹಳ್ಳಕ್ಕೆ ಕಳುಹಿಸಿದರು. ತನ್ನ ಹೆಂಡತಿಯು ತ್ರಾಸು ಕಣ್ಮುಟ್ಟಿ ನೋಡಲಾರದೆ ಸ್ವಾಮಿಯುವರಲ್ಲಿ ಉಪಾಯ ಕೇಳಲಿಕ್ಕೆ ಬಂದ ನಾಗಪ್ಪನವರು ಆಶ್ಚರ್ಯಚಕಿತರಾದರೂ ಗುರುವಿನಲ್ಲಿ ನಿಷ್ಠೆಯುಳ್ಳವರು ಸ್ವಾಮಿಯುವರ ಅಪ್ಪಣೆಯು ಮೇರೆಗೆ ಹಳ್ಳಕ್ಕೆ ಹೋದರು ಅವರು ಸ್ವಾಮಿಯುವರ ಲಂಗೋಟಿಯುನ್ನು ಒಗೆಯಲಿಕ್ಕೆ ಆರಂಭಿಸಿದಾಗ ಮನೆಯುಲ್ಲಿ ಅವರ ಹೆಂಡತಿಯು ತ್ರಾಸು ಕಡಿಮೆಯಾಯಿತು. ಲಂಗೋಟಿಯುನ್ನು ಒಗೆದುಕೊಂಡು ಬಂದ ನಾಗಪ್ಪನವರು ಸ್ವಾಮಿಯುವರಿಗೆ ನಮಸ್ಕರಿಸಲು ಸ್ವಾಮಿಯುವರು “ನಾಗಪ್ಪಾ ಚಿಂತಿಸಬೇಡ ಹೋಗು ನಿನ್ನ ಹೆಂಡತಿಯು ಗಂಡು ಮಗುವನ್ನು ಹೆತ್ತಿರುವಳು” ಎಂದು ಆಶೀರ್ವದಿಸಿ ಮನೆಗೆ ಕಳುಹಿಸಿದರು. ನಾಗಪ್ಪನವರು ಮನೆಗೆ ಬಂದು ನೋಡಲು ಗುರುವಿನ ವಾಕ್ಯದಂತೆ ಎಲ್ಲವೂ ಸರಳ ರೀತಿಯಿಂದ ಸಾಗಿತ್ತು. ಅಗ ನಾಗಪ್ಪನವರು ಗುರುಕೃಪೆಯಿಂದ ಜನಸಿದ ಮಗುವಿಗೆ ಮಡಿವಾಳಪ್ಪನವರೆಂದು ಹೆಸರು ಇಟ್ಟರು.

ಮಹಾಸ್ವಾಮಿಯುವರ ವಾಸಸ್ಥಾನವಾದ ಗರಗದಲ್ಲಿಯು ಆಗಿನ ಶ್ರೀಮಂತರಾದ ಗಂಗಪ್ಪಾ ಕುರ್ಲಿ ಎಂಬವರ ಮನೆಯುಲ್ಲಿ ಎಲ್ಲರಿಗೂ ಶೀಕು ಆಗಿ ಬಳಲುತ್ತಿದ್ದರು. ಆಗ ಗಂಗಪ್ಪನವರಿಗೆ ಮಡಿವಾಳೇಶ್ವರರ ಮಠಕ್ಕೆ ಹೋಗಬೇಕೆಂಬ ಇಚ್ಛೆಯು ಹುಟ್ಟಿ ಮಠಕ್ಕೆ ಹೋದರು. ಅಲ್ಲಿ ಅವರು ಗುರುವಿಗೆ ನಮಸ್ಕರಿಸಿ ಮನೆಯುಲ್ಲಿ ನಡೆದ ಸಂಗತಿಯುನ್ನು ತಿಳಿಸಲು ಮಹಾ

ಸ್ವಾಮಿಯವರು ಪ್ರೇಮದಿಂದ ಗಂಗಣ್ಣಾ ಗುರುದಕ್ಷಿಣೆಯನ್ನು ಸಲ್ಲಿಸಿದರೆ ನಿನಗೆ ಕ್ಷೇಮವಾಗುವದು. ಎಂದು ಹೇಳಲಾಗಿ ಲೋಭದಾಶೆಯ ಗಂಗಪ್ಪನವರು ಗುರುವಿನ ವಿಷಯಕ್ಕೆ ವಿಪರೀತ ಕಲ್ಪಿಸಿ ಅವರ ಮಾತು ತಿರಸ್ಕರಿಸಿ ಮನೆಗೆ ಹೋದರು. ಅಲ್ಲಿ ಕುಳಿತ ಜನರ ಮುಂದೆ ಸ್ವಾಮಿಯವರು ನೋಡಿ ಗಂಟೆಪ್ಪ, ಗಂಗಪ್ಪನ ಪ್ರಾಯಶ್ಚಿತ್ತ ಅವನಿಗೆ ತೀವ್ರ ಆಗುವದು ಎಂದು ಹೇಳಿ ನಕ್ಕರು. ಹೀಗೆ ಗಂಗಪ್ಪನವರ ವಿಷಯಕ್ಕೆ ನುಡಿದ ಭವಿಷ್ಯ ಸೂಚನೆಯು ಯಾರಿಗೂ ತಿಳಿಯಲಿಲ್ಲ. ಹೇಗೆ ತಿಳಿಯಬೇಕು ಮಹಾತ್ಮರ ಲೀಲೆಯನ್ನು ಕಂಡು ಹಿಡಿಯಲು ಮಾನವ ದೇಹಧಾರಿಗಳಿಗೆ ಸಾಧ್ಯವಾದೀತೆ.

ಇಂತು ಗುರು ವಾಕ್ಯ ತಿರಸ್ಕರಿಸಿ ಮನೆಗೆ ಹೋದ ಕುರ್ಲಿ ಗಂಗಪ್ಪನವರಿಗೆ ಮರುದಿನ ಜ್ವರ ಬಂದು ಬಾಯಿಯೇ ಬಂದು ಆಗಿ ಮಾತನಾಡಲಿಕ್ಕೆ ಬರದಂತಾಯಿತು. ಆಗ ಅವರ ಮನೆಯ ಯಜಮಾನಿಯಾದ ಶಿವಲಿಂಗವ್ವನವರು ಘಾಬರಿಯಾಗಿ ಕೇಳಲಾಗಿ ಸ್ವಾಮಿಯವರ ಮಠದಲ್ಲಿ ನಡೆದ ವರ್ತಮಾನವನ್ನು ಕೇಳಿ ಘಾಬರಿಯಿಂದ ಮಠಕ್ಕೆ ಹೋಗಿ ನಮಸ್ಕರಿಸಿ ಗುರುವಿನ ಮುಂದೆ ನಿಲ್ಲಲಾಗಿ ಮಡಿವಾಳಸ್ವಾಮಿಯವರು ಕೇಳಿದರು— "ಏಕೆ ಶಿವಲಿಂಗವ್ವನವರೇ ಏತಕ್ಕಾಗಿ ಬಂದಿರಿ" ಎಂದು ಕೇಳಲಾಗಿ ಶಿವಲಿಂಗವ್ವನವರು ನಡೆದ ವರ್ತಮಾನವನ್ನು ತಿಳಿಸಿದರು. ಮತ್ತು ತನ್ನ ಮನೆತನವನ್ನು ಉಧ್ಧಾರಮಾಡಲು ಬೇಡಿಕೊಂಡರು. ಆಗ ಸ್ವಾಮಿಯವರು ತಮ್ಮ ಹಳೇ ಪಾದುಕೆಗಳನ್ನು ಕೊಟ್ಟು ಶಿವಲಿಂಗಮ್ಮಾ ಇವುಗಳನ್ನು ಒಯ್ದು ತಲೆದಿಂಬಿಗೆ ಇಡು ನಾಳೆ ಒಳ್ಳೇದಾಗುವದು. ಮತ್ತು ಹೊಸ ಪಾದುಕೆಗಳನ್ನು ಮಾಡಿಸಿಕೊಂಡು ಬಾ ಎಂದು ಹೇಳಿ ಕಳುಹಿಸಿದರು. ಮಹಾಸ್ವಾಮಿಯವರ ಹೇಳಿಕೆಯಂತೆ ಶಿವಲಿಂಗವ್ವನವರು ನಡೆದುಕೊಳ್ಳಲು ಗಂಗಪ್ಪನವರಿಗೆ ಒಳ್ಳೇದಾಯಿತು. ಶಿವಲಿಂಗವ್ವನವರು ಹೊಸ ಪಾದುಕೆಗಳನ್ನು ಮಾಡಿಸಿಕೊಂಡು ಗುರುದಕ್ಷಿಣೆ ತಗೆದುಕೊಂಡು ಮಠಕ್ಕೆ ಬಂದು ಗುರುವಿಗೆ ಮುಟ್ಟಿಸಿ ನಮಸ್ಕರಿಸಿ ಹೋದರು.

ಮಹಾನುಭಾವ ಮಹಾತ್ಮರ ಲೀಲೆಯನ್ನರಿಯದೆ ಅವರು ಲೋಭವಂತರೆಂಬ ದೋಷದ ತಪ್ಪುತಿಳುವಳಿಕೆಯ ಗಂಗಪ್ಪನವರಂತೆ ಭವದಲ್ಲಿಯ

ತ್ರಾಸಿಗೀಡಾಗದೆ ಅವರಲ್ಲಿ ವಿಶ್ವಾಸವಿಟ್ಟು ನಡೆಯುವ ಮಾನವನು ಮುಕ್ತಿ ಹೊಂದುವದು ಸಹಜ.

ಶ್ರೀಗುರು ಮಡಿವಾಳಸ್ವಾಮಿಯವರು ಗರಗಕ್ಕೆ ಬಂದ ಮೇಲೆ ಪ್ರತಿ ನಿತ್ಯದಲ್ಲಿಯೂ ತಮ್ಮ ಮಠದಲ್ಲಿಯ ಮರಿಗಳನ್ನು ಊರಲ್ಲಿ ಭಿಕ್ಷಕ್ಕೆ ಕಳುಹಿ ಸುತ್ತಿದ್ದರು. ಅವರು ಪ್ರತಿನಿತ್ಯ ತಿರುಗಿ ಬಂದ ಕೂಡಲೇ ಸ್ವಾಮಿಯವರು ಅವರಿಗೆ ಹೆಚ್ಚಾದ ರೊಟ್ಟಿಗಳನ್ನು ಒಣಗಿಸಿ ಇಡಲಿಕ್ಕೆ ಹೇಳಿದರು. ಮಹಾ ಸ್ವಾಮಿಯು ಹೀಗೇಕೆ ಹೇಳಿದರೆಂಬ ಕಲ್ಪನೆಯು ಒಬ್ಬರಿಗೂ ಕೂಡಾ ಆಗ ಲಿಲ್ಲ. ಮುಂದೆ ಕೆಲ ದಿನಗಳವರೆಗೆ ಈ ಕ್ರಮ ಸಾಗಿಸಲು ನಾಡಿನಲ್ಲಿ ದುರ್ಭಿಕ್ಷೆ ಯಾಗಿ ಜನರು ಅಲ್ಲಲ್ಲಿ ಆಹಾರವಿಲ್ಲದೆ ಸಾಯಲಾರಂಭಿಸಿದರು. ಆಗ ಮಠ ದಲ್ಲಿ ಬಂದವರಿಗೆ ರೊಟ್ಟಿಯನ್ನು ಕೊಟ್ಟು ಬಹು ಜನರ ಪ್ರಾಣ ರಕ್ಷಿಸಿದರು. ಕಾರಣ ಮಹಾತ್ಮರು ತ್ರಿಕಾಲ ಜ್ಞಾನಿಗಳೆಂಬದರಲ್ಲಿ ಸಂದೇಹವಿಲ್ಲಾ.

ಈ ರೀತಿ ಮಹಾಸ್ವಾಮಿಯವರು ಜನರನ್ನು ದುರ್ಭಿಕ್ಷೆಯಿಂದ ರಕ್ಷಣ ಮಾಡಿ ಜನರ ಪ್ರಿಯರಾಗುತ್ತಿರಲು ಪ್ರತಿನಿತ್ಯವು ಸದ್ಭಕ್ತರನ್ನು ಕೂಡಿಸಿ ಕೊಂಡು ತಮ್ಮ ಗತಿಸಿ ಹೋದ ಆಯುಷ್ಯದಲ್ಲಿಯ ಘಟನೆಗಳನ್ನು ಹೇಳು ತ್ತಿದ್ದರು.

ಒಮ್ಮೆ ಮಹಾಸ್ವಾಮಿಯವರು ಶೀಲಾ ನದಿಯ ದಂಡೆಯಲ್ಲಿ ಒಂದು ಘೋರಾರಣ್ಯದಲ್ಲಿ ವಾಸವಾಗಿರುವ ಒಬ್ಬ ಹುಚ್ಚಯ್ಯ ಮಹಾತ್ಮರ ದರ್ಶನಕ್ಕೆ ಹೋಗಬೇಕೆಂಬ ಇಚ್ಛೆಯಿಂದ ಏಕಾಂಗಿಯಾಗಿ ಪ್ರವಾಸ ಮಾಡುತ್ತಿದ್ದರಂತೆ ಆಗ ದಾರಿಯಲ್ಲಿ ಒಬ್ಬ ಹೆಣ್ಣುಮಗಳು (ಮುದುಕೆ) ಮಗನೇ ಆ ಸ್ವಾಮಿಯ ವರನ್ನು ಭೆಟ್ಟಿಯಾಗುವದು ತೀರ ಕಠಿಣ. ಅಲ್ಲಿ ಹೋಗಿ ತಿರುಗಿ ಬರುವದೂ ತೀರ ಕಠಿಣ. ಕಾರಣಾ ನೀನು ಹೋಗಬೇಡವೆಂದು ಉಪದೇಶ ಮಾಡಿದಳಂತೆ ಅದಕ್ಕೆ ಸ್ವಾಮಿಯವರು ತಾಯೀ ನಿನ್ನ ಆಶೀರ್ವಾದ ಬಲವಿದ್ದರೆ ನಾನು ಯಾವದೂ ಭಯವಿಲ್ಲದೆ ತಿರುಗಿ ಬರುವದು ಸತ್ಯ. ಕಾರಣ ನೀನು ಆಶೀ ರ್ವಾದ ಮಾಡು ಎಂದು ಹೇಳಲು ಆ ತಾಯಿಯು ಮಡಿವಾಳಸ್ವಾಮಿಯವ ರಿಗೆ ಆಶೀರ್ವಾದ ಮಾಡಿದಳು. ಮಹಾಸ್ವಾಮಿಯವರು ಕೆಲ ದೂರ ಹೋದ ನಂತರ ಒಂದು ಹುಲಿಯು ಭೀಕರ ಧ್ವನಿಗೈಯುತ್ತ ತನ್ನ ಕ್ರೂರತ್ವಕ್ಕೆ ಸರಿ ಯಾಗಿ ಅರ್ಭಟಿಸುತ್ತ ಸ್ವಾಮಿಯವರ ಮೇಲೆ ಬಂದಿತು. ಆಗ ಸ್ವಾಮಿ

ಯವರು ಬಗ್ಗಿ ಒಂದು ಕಲ್ಲು ತಗೆದುಕೊಂಡು ಹುಲಿಗೆ ಆಯಕಟ್ಟಿನಲ್ಲಿ ಒಗೆಯಲಾಗಿ ಅದು ಭೀಕರ ಸ್ವರದಿಂದ ಆಕ್ರೋಶಮಾಡಿ ಭೂಮಿಗೆ ಉರುಳಿತು. ಈ ರೀತಿಯಾಗಿ ಮಹಾಸ್ವಾಮಿಯವರು ತಮ್ಮ ಯೋಗಪ್ರಭಾವದಿಂದ ದಾರಿಯನ್ನು ನಡೆಯುತ್ತಿರಲು ೬ ಹುಲಿಗಳು ಭೆಟ್ಟಿಯಾದವು. ಅವೆಲ್ಲವನ್ನು ಸಂಹರಿಸಿದ ಮಹಾಸ್ವಾಮಿಯವರಿಗೆ ಕಡೆಗೆ ಒಂದು ತೀರ ವಯಸ್ಸಾದ ಹುಲಿಯ ದರ್ಶನವಾಯಿತು. ಅದು ಸ್ವಾಮಿಯವರನ್ನು ಕಂಡಕೂಡಲೇ ನಮ್ರತ್ವವನ್ನು ತೋರಿದಂತೆ ನಟಿಸಿತು. ಅದನ್ನು ಕಂಡು ಕೋಮಲ ಹೃದಯದ ಸ್ವಾಮಿಯವರಲ್ಲಿ ಭೂತ ದಯೆ ಹುಟ್ಟಿ ಅದನ್ನು ಕ್ಷಮಿಸಿ ಮೈಮೇಲೆ ಕೈಯಾಡಿಸಿ ಮುಂದಕ್ಕೆ ಸಾಗಿದರು. ಮುಂದೆ ಮಡಿವಾಳೇಶ್ವರರು ತಾವು ಮುಟ್ಟಬೇಕೆಂದಿದ್ದ ಸ್ಥಾನಕ್ಕೆ ಮುಟ್ಟಿ ಮಹಾತ್ಮರ ದರ್ಶನ ಹೊಂದಿ ತಮ್ಮ ಕಾರ್ಯ ಮುಗಿಸಿಕೊಂಡು ಹಿಂದಿರುಗಿ ಬರುವಾಗ ತಮಗೆ ಆಶೀರ್ವಾದ ಮಾಡಿದ ಆ ತಾಯಿ ಗೆ ಭೆಟ್ಟಿಯಾಗಿ ಬಂದರು.

ಯೋಗಿಗಳ ಯೋಗಸಾಮರ್ಥ್ಯದ ಮುಂದೆ ಸಕಲ ಜಗತ್ತಿನಲ್ಲಿ ಯಾವ ಸಾಮರ್ಥ್ಯದ ಆಟವೂ ನಡೆಯಲಾರದು.

ಮಹಾಸ್ವಾಮಿಯವರು ಮುರಗೋಡಿನಲ್ಲಿ ಇರುವಾಗ ಅಲ್ಲಿ ಶೆಟ್ಟರ ಮಗನ ಲಗ್ನಕ್ಕಾಗಿ ಬೇರೂರಿಗೆ ಹೋಗಿದ್ದರು. ಅವರ ಸಂಗಡ ಮಹಾಸ್ವಾಮಿಯವರು ಹೋಗಿದ್ದರಂತೆ ಊರ ಶೆಟ್ಟರ ಲಗ್ನವೆಂದಮೇಲೆ ಎಲ್ಲ ತರಹದ ವಿನೋದಗಳಿಗೂ ಆಸ್ಪದವಿತ್ತು. ಅದರಲ್ಲಿ ನೃತ್ಯ-ಸಂಗೀತಗಳು ಸಹ ಇದ್ದವು. ಹೀಗೆ ಇದ್ದ ಮದುವೆಯ ಸಮಾರಂಭದಲ್ಲಿ ನೃತ್ಯಮಾಡುತ್ತಿದ್ದ ಒಬ್ಬ ವೇಶ್ಯೆಯು ಸ್ವಾಮಿಯವರಲ್ಲಿ ಅನುರಕ್ತಳಾಗಿದ್ದಳು. ತ್ರಿಕಾಲಜ್ಞಾನಿಗಳಾದ ಮಹಾಸ್ವಾಮಿಯವರಿಗೆ ಇದು ತಿಳಿಯದೇ ಹೋಗಲಿಲ್ಲಾ. ಅವಳ ಅಂತರ್ಗತವನ್ನು ಕಂಡು ಮಹಾಸ್ವಾಮಿಯವರು ಎಲ್ಲರಿಗೂ ತಿಳಿಸಿ ಯಾರಿಗೂ ತಿಳಿಯುದಂತೆ ಆ ವೇಶ್ಯೆ ಊರ ಹೊರಗಿರುವ ಗುಡಿಗೆ ಬರಲಿಕ್ಕೆ ಸಂಚು ಮಾಡಿದ್ದರು. ಮತ್ತು ಅಲ್ಲಿಯ ನಾಲ್ಕಾರು ಪ್ರಮುಖರ ಕೂಡ ಹೋಗಿ ಆ ಗುಡಿಯಲ್ಲಿ ಕುಳಿತರು. ಮೊದಲೇ ಕಾಮಾತುರಳಾದ ಆ ವೇಶ್ಯೆಯು ಮಹಾಸ್ವಾಮಿಯವರ ಹೇಳಿಕೆಯಂತೆ ಅವರು ಹೇಳಿದ ಹೊತ್ತಿಗೆ ಮಹಾಸ್ವಾಮಿಯವರು ಹೇಳಿದ ಸ್ಥಾನಕ್ಕೆ ಹೋದಳು. ಅವಳು ಸ್ವಾಮಿಯವರನ್ನು ನೋಡಿ

ದಾಕ್ಷಣವೇ ಅಲ್ಲಿ ಕುಳಿತ ಜನರ ಅರಿವು ಕೂಡ ಇಲ್ಲದಲೇ ಸ್ವಾಮಿಯವರ ಮುಂದೆ ಕುಣಿಯಲಾರಂಭಿಸಿದಳು. ಮಹಾಸ್ವಾಮಿಯವರ ಸಮೀಪಕ್ಕೆ ಆ ವೇಶ್ಯೆಯು ಬಂದಾಗ ಸ್ವಾಮಿಯವರು ತಮ್ಮ ಚೈತನ್ಯವನ್ನು ಚೇತರಿಸಿ ಇಂದ್ರಿಯನ್ನು ಹೊರಚಿಮ್ಮಲು ಅದು ಆ ವೇಶ್ಯೆಗೆ ಸಿಡಿದು ಅವಳ ಮೈ ಉರಿಯಲಾರಂಭಿಸಿತು. ಆಗ ಆ ವೇಶ್ಯೆಯು ಪಶ್ಚಾತ್ತಾಪ ಹೊಂದಿ ಸ್ವಾಮಿಯವರಲ್ಲಿ ಕ್ಷಮೆಬೇಡಲು ಸ್ವಾಮಿಯವರು ಕ್ಷಮಿಸಿ ಅವಳನ್ನು ಉದ್ಧರಿಸಿದರು.

ಶ್ರೀಗುರು ಮಡಿವಾಳಸ್ವಾಮಿಯವರು ನೇಗಿನಹಾಳದಲ್ಲಿ ವಾಸಮಾಡುತ್ತಿರುವಾಗ ಅಲ್ಲಿಯ ತಮ್ಮ ಪ್ರೇಮದ ಶಿಷ್ಯರಾದ ದೇಸಾಯಪ್ಪನವರ ಮನೆಯಲ್ಲಿಯೇ ಇರುತ್ತಿದ್ದರು. ಅವರ ಪ್ರತಿನಿತ್ಯದ ಸೇವೆಯನ್ನು ದೇಸಾಯಪ್ಪನವರು ಸ್ವತಃ ಮಾಡುತ್ತಿದ್ದರು. ಅವರು ಪ್ರತಿನಿತ್ಯ ಬಹಿರ್ಮುಖಿಗೆ ಹೋಗುವ ಸ್ಥಾನವಂದು ಇತ್ತು. ಈ ರೀತಿ ಒಂದು ವರ್ಷ ಕಳೆದುಹೋಗಲು ಒಂದು ದಿವಸ ದೇಸಾಯಪ್ಪನವರ ಹುನೆತನದ ಹೆಣ್ಣುಮಗಳು ನೀರು ತರಲಿಕ್ಕೆ ಹೊರಟಾಗ ನೆರೆಮನೆಯ ಒಬ್ಬ ಹೆಣ್ಣುಮಗಳು ಏನು ತಂಗೀ ಎಲ್ಲಿಗೆ ಹೊರಟೆ ಎಂದು ಕೇಳಿದಾಗ ಅದಕ್ಕೆ ಅವಳು "ಇರುವನಲ್ಲ ಆ ಬಾವಾ ಅವನಿಗೆ ನೀರು ತರಲಿಕ್ಕೆ" ಎಂದು ಹೇಳಿದಳು. ಈ ಪರಿ ಮಡಿವಾಳಸ್ವಾಮಿಯವರನ್ನು ಉದ್ದೇಶಿಸಿದ್ದನ್ನು ಕಂಡು ಮಹಾಸ್ವಾಮಿಯವರು ಹೊಲಕ್ಕೆ ಹೋದ ದೇಸಾಯಪ್ಪನವರು ತಿರುಗಿ ಬರುವದರೊಳಗಾಗಿ ಮನೆಬಿಟ್ಟು ಹೋಗಿದ್ದರು. ಪ್ರತಿನಿತ್ಯವು ತನ್ನ ದಣಿವು ಎಷ್ಟಿದ್ದರೂ ಮಹಾಸ್ವಾಮಿಯವರ ದರ್ಶನವನ್ನು ತಗೆದುಕೊಂಡು ಅವರ ಕ್ಷೇಮವನ್ನು ಕೇಳಿ ಅವರ ಶುಶ್ರೂಷೆ ಮಾಡಿ ಊಟಕ್ಕೆ ಹೋಗುತ್ತಿದ್ದ ದೇಸಾಯಪ್ಪನವರು ಮನೆಗೆ ಬಂದು ನೋಡುತ್ತಾರೆ ಸ್ವಾಮಿಯವರು ಕಾಣದಂತಾಗಿದ್ದರು. ಎಲ್ಲರನ್ನು ವಿಚಾರಿಸಲಾಗಿ ಸ್ವಾಮಿಯವರು ಮನಸ್ಸಿಗೆ ವಿಷಾದ ಮಾಡಿಕೊಂಡು ಹೋದದ್ದು ಕಂಡು ಮನಸ್ಸಿನಲ್ಲಿ ಹಳಹಳಿಸಿ ದೇಸಾಯಪ್ಪನವರು ಊಟವಿಲ್ಲದೆ ತನ್ನ ನಾಲ್ಕು ಮಂದಿ ತಮ್ಮಂದಿರೊಡನೆ ಸ್ವಾಮಿಯವರನ್ನು ಹುಡುಕಲಾರಂಭಿಸಿದನು ಈ ರೀತಿ ಧೇನುವಿಗೆ ಕರುವು ಹುಟ್ಟಿದಂತೆ ಹುಡುಕುತ್ತಿರುವ ದೇಸಾಯಪ್ಪನವರು ಮೂರು ದಿವಸ ಹುಡುಕಿದ ನಂತರ ಬರುವಾಗ್ಗೆ ನೇಗಿನಹಾಳದ ಊರ ಹೊರಗಿನ

ಮುಳ್ಳುಗಳ್ಳಿಯ ಬೇಲಿಯಲ್ಲಿ ಕೆವ್ಮ್ಮದಂತೆ ಧ್ವನಿಯಾಯಿತು. ಆಗ ದೇಸಾಯಪ್ಪನವರು ಅವರಿಗೆ ಎಪ್ಪಾ ಎಂದು ಕೂಗಲು ಮಹಾಸ್ವಾಮಿಯವರು "ಓ" ಎಂದು ಉತ್ತರಿಸಿದರು ಆಗ ದೇಸಾಯಪ್ಪನವರು ತಮ್ಮ ತಮ್ಮಂದಿರನ್ನು ಕರೆದುಕೊಂಡು ಬಂದು ಮಹಾಸ್ವಾಮಿಯವರ ಸುತ್ತಲಿನ ಮುಳ್ಳುಗಳ್ಳಿಯನ್ನು ಸವರಿ ಮಹಾಸ್ವಾಮಿಯವರನ್ನು ಕರೆದುಕೊಂಡು ಮನೆಗೆ ಬಂದರು. ಈ ರೀತಿ ಮನೆಗೆ ಬಂದ ಮಹಾಸ್ವಾಮಿಯವರ ಸೇವೆಯನ್ನು ದೇಸಾಯಪ್ಪನವರು ಸ್ವತಃ ಮಾಡಲಾರಂಭಿಸಿದರು. ದೇಸಾಯಪ್ಪನವರು ಮಹಾಸ್ವಾಮಿಯವರಲ್ಲಿ ಭಕ್ತಿಯನ್ನಿಟ್ಟು ಪ್ರೇಮದಿಂದ ಅವರ ಸೇವೆ ಮಾಡುತ್ತಿರಲು ಅವರ ಹೊಲಕ್ಕೆ ಗೊಬ್ಬರ ಹಾಕುವ ಹೊತ್ತು ಬಂತು. ಆ ವೇಳೆಯಲ್ಲಿ ಅವರು ಮಡಿವಾಳಸ್ವಾಮಿಯವರು ಪ್ರತಿನಿತ್ಯ ಬಹಿರ್ಭೂಮಿಗೆ ಹೋಗುವ ತಿಪ್ಪೆಯಲ್ಲಿ ಗೊಬ್ಬರ ತೆಗೆಯುವಾಗ ೨ ಬುಟ್ಟಿ ಬಂಗಾರದ ಪುತ್ಥಳಿಗಳು ಹೊರಟವು. ಅದನ್ನು ಕಂಡ ದೇಸಾಯಪ್ಪನವರು ಶ್ರೀಗುರುವು ತನ್ನ ಮನಪರೀಕ್ಷೆಗಾಗಿ ಈ ರೀತಿ ಲೋಭದಾತೆ ತೋರಿಸಿದನು. ಎಂಬ ಭಾವನೆ ತಿಳಿದು ಆ ಪುತ್ಥಳಿಗಳನ್ನು ತಂದು ಮಹಾಸ್ವಾಮಿಯವರ ಮುಂದಿಟ್ಟು ಎಪ್ಪಾ ಇದೇನು ಚಮತ್ಕಾರ ಎಂದು ಕೇಳಲಾಗಿ "ದೇಸಾಯಿ ನಿನಗೆ ಗುರುವು ಕೊಟ್ಟಿರುವನು ತಗೆದುಕೋ" ಎಂದು ಹೇಳಲು ನಿಷ್ಕಾಮ ಪ್ರೇಮವುಳ್ಳ ಆ ದೇಸಾಯಪ್ಪನವರು ಒಪ್ಪಲಿಲ್ಲ. ಅವರಿಗೆ ಮಹಾಸ್ವಾಮಿಯವರು ದೇಸಾಯಿ ಹಳ್ಳದ ಮೇಲೆ ಮಠಕಟ್ಟಿಸು ಎಂದು ಹೇಳಲು ಅದರಂತೆ ದೇಸಾಯಪ್ಪನವರು ವರ್ತಿಸಿದರು.

ಈ ರೀತಿ ಮಹಾಸ್ವಾಮಿಯವರೊಡನೆ ಪ್ರೇಮಪೂರಿತ ಭಕ್ತಿಯಿಂದ ನಡೆದುಕೊಂಡ ದೇಸಾಯಪ್ಪನವರ ಮನೆತನವು ಗುರುಕೃಪೆಯನ್ನು ಪಡೆದು ಊರ್ಜಿತಾವಸ್ಥೆಯನ್ನು ಪಡೆಯಿತು. ಅದೇ ಗುರುವಿನ ಸ್ಮರಣಾರ್ಥ ಆ ದೇಸಾಯಪ್ಪನವರ ಮನೆತನದವರು ಈಗಲೂ ಶ್ರೀಗುರು ಮಡಿವಾಳೇಶ್ವರರ ಮಠಕ್ಕೆ ಒಬ್ಬ ಮರಿದೇವರನ್ನು ಬಿಡುತ್ತಾರೆ. ಈ ಶ್ರೀಗುರು ಮಡಿವಾಳೇಶ್ವರರ ತರುವಾಯ ಮೂರನೇ ಪಟ್ಟಕ್ಕೆ ಬಾಧ್ಯರಾದ ಶ್ರೀಮಾನ್‌ರಂಜನ್ ಮರಿಮಡಿವಾಳ ದೇವರು ಈಗ ಈ ಕಥಾಸಾರದಲ್ಲಿ ನಡೆದಿರುವ ಮಡಿವಾಳೇಶ್ವರರ ಪರಮ ಭಕ್ತಶಿರೋಮಣಿ ಶ್ರೀಯುತ ನೇಗಿನಹಾಳ ದೇಸಾಯಪ್ಪನ

ವರ ಮನೆತನದವರೇ ನೋಡಿ ಗುರುವಿನಲ್ಲಿ ಭಕ್ತಿಯುಳ್ಳ ಪರಮಭಕ್ತರಿಗೆ ಗುರುಕರುಣೆಯಾಗುವದು ಸಹಜ.

ಮಹಾಸ್ವಾಮಿಯವರು ಗರಗದಲ್ಲಿಯೇ ವಾಸಮಾಡಲಿಕ್ಕೆ ಹತ್ತಿದ ನಂತರ ಅಲ್ಲಿ ಅವರ ಸೇವಾವೃತ್ತಿಯನ್ನು ಕೈಕೊಂಡವರು ಅನೇಕರು. ಅವರಲ್ಲಿ ಮುಖ್ಯರೆಂದರೆ ದೇಗಲೋಳಿಯವರಾದ ಶಂಕರಪ್ರಭುದೇವರು, ಮತ್ತು ಮಹಾಸ್ವಾಮಿಯವರು ಕಾಲಾಧೀನರಾದ ನಂತರ ಅವರ ಚಿರಪಟ್ಟಕ್ಕೆ ಬಾಧ್ಯರಾದ ಶ್ರೀಗುರು ಚನ್ನಬಸವಾರ್ಯರು, ನೇಗಿನಹಾಳದಲ್ಲಿಯ ಖಾನಾಪೂರದವರ ಮನೆತನದವರು. ಇದು ಅಲ್ಲದೆ ಇವರ ಸೇವೆಯನ್ನು ಪ್ರೇಮದಿಂದ ಮಾಡಿದವರು ಇಬ್ಬರು. ಶ್ರೀಯುತ ಶಿದಲಿಂಗಸ್ವಾಮಿಯವರು, ಮತ್ತು ಹಣಗಿಗಂಟೆಪ್ಪನವರು, ಇವರಿಬ್ಬರು ಪ್ರೇಮದಿಂದ ಮಹಾಗುರುವಿನ ಸೇವಾವೃತ್ತಿಯನ್ನು ಕೈಕೊಂಡು ಅಖಂಡ ಮುಮುಕ್ಷ ಮಾರ್ಗದ ಪ್ರಥಮ ಸೋಪಾನವಾದ ಗುರುಕೃಪೆಗೆ ಪಾತ್ರರಾದರು. ಮಾಹಾಸ್ವಾಮಿಯವರ ಸೇವೆಯನ್ನು ಶಿದಲಿಂಗ ಮರಿದೇವರು ಈ ರೀತಿ ಮಾಡುತ್ತಿದ್ದರು.

ಪ್ರತಿನಿತ್ಯ ಮಹಾಸ್ವಾಮಿಯವರು ಏಳುವ ಪೂರ್ವದಲ್ಲಿ ಎದ್ದು ತಮ್ಮ ನಿತ್ಯಕರ್ಮ ತೀರಿಸಿಕೊಂಡು ಮಹಾಸ್ವಾಮಿಯವರ ಮಲಮೂತ್ರ-ಕಫವಿಸರ್ಜನೆಯ ಪಾತ್ರೆಗಳನ್ನೆತ್ತಿಕೊಂಡು ಹೋಗಿ ಅವುಗಳನ್ನು ತೊಳೆದು ಅವರ ಮೈಲಿಗೆ ಬಟ್ಟೆಗಳನ್ನು ತಗೆದುಕೊಂಡು ಬಂದು ಸ್ವಚ್ಛಮಾಡಿ ಮಹಾಸ್ವಾಮಿಯವರ ಸ್ನಾನಕ್ಕೆ ನೀರು ಕಾಯಲಿಕ್ಕೆ ಇಟ್ಟು ಊರಲ್ಲಿ ಮೊಸರು ಭಿಕ್ಷೆಗಾಗಿ ಹೋಗುತ್ತಿದ್ದರು. ತಿರುಗಿ ಬಂದ ನಂತರ ಸತತವು ಮಠದಲ್ಲಿ ವಾಸಮಾಡಿದ ಗಂಗಾರಾಮನೆಂಬ ಬೆಕ್ಕಿಗೆ ಅನ್ನ ಮೊಸರು ಉಣಿಸಿ ಮಹಾಸ್ವಾಮಿಯವರಿಗಾಗಿ ಜಾಲಿ ಕಡ್ಡಿಯನ್ನು ತಂದಿಟ್ಟು ಅವರು ಸೇದುವ ಗುಡಗುಡಿಯನ್ನು ಸ್ವಚ್ಛಮಾಡಿ ಅದಕ್ಕೆ ತಂಬಾಕು ತುಂಬಿ ಸಿದ್ಧಗೊಳಿಸಿ ಮಹಾಸ್ವಾಮಿಯವರ ಕೈಯಲ್ಲಿ ಕೊಟ್ಟು ಅವರನ್ನು ಹೊರಗೆ ಕರೆದುಕೊಂಡು ಹೋಗಿ ಗುಡಗುಡಿಯನ್ನು ಸೇದಲು ಅವರ ಕೈಯಲ್ಲಿ ಕೊಡುತ್ತಿದ್ದರು. ಮಹಾಸ್ವಾಮಿಯವರು ಗುಡಗುಡಿ ಸೇದುತ್ತ ಮಲವಿಸರ್ಜನೆ ಮಾಡಿದ ನಂತರ ಅದನ್ನು ಸ್ವಚ್ಛಮಾಡಿ ಗುಡಗುಡಿ ತೊಳೆದು ಮಂಚದ ಮೇಲೆ ರತ್ನಗಂಬಳಿ ಹಾಸಿ ಶ್ಯಾಲು

ಹಚ್ಚಡಗಳನ್ನು ಮಡಿಕೆ ಮಾಡಿಟ್ಟು ಅವರ ಸ್ನಾನದ ವ್ಯವಸ್ಥೆಯನ್ನು ಮಾಡಿ ಕೊಬ್ಬರಿಯಎಣ್ಣೆಯಲ್ಲಿ ಕರ್ಪೂರವನ್ನು ಕೂಡಿಸಿ ಮಹಾಸ್ವಾಮಿಯವರ ಅಂಗಕ್ಕೆ ಲೇಪಿಸಿ ಶೀಗಿಕಾಯಿಪುಡಿ ಕೂಡಿದ ನೀರಿನಿಂದ ಸ್ನಾನ ಮಾಡಿಸುತ್ತಿದ್ದರು ಆ ಮೇಲೆ ಮಹಾಸ್ವಾಮಿಯವರ ಪೂಜೆಯನ್ನು ಮಾಡಿ ಅವರಿಗೆ ನೈವೇದ್ಯಮಾಡಿ ಅವರ ಭೋಜನದ ನಂತರ ಮಂಚದ ಮೇಲೆ ಅವರನ್ನು ಮಲಗಿಸಿ ತಾವು ಊರಲ್ಲಿ ಭಕ್ತರ ಮನೆಗೆ ಹೋಗಿ ಊಟ ತೀರಿಸಿಕೊಂಡು ಕಜ್ಜಾಯ ಭಿಕ್ಷವನ್ನು ಮಾಡಿಕೊಂಡು ಬಂದು ವಿದ್ಯಾಭ್ಯಾಸ ಮಾಡಿ ಅನುಕೂಲ ನೋಡಿಕೊಂಡು ಕಟ್ಟಿಗೆ ನೀರಿನ ವ್ಯವಸ್ಥೆಮಾಡಿ ದೀಪ ಹಚ್ಚಿ ಶ್ರೀಗಳನ್ನು ಹೊರಗೆ ಕರೆದುಕೊಂಡು ಬಂದು ಅವರ ಮಲವಿಸರ್ಜನೆ ಮುಂತಾದವುಗಳನ್ನು ಮುಗಿಸಿ ಅವರನ್ನು ಮತ್ತೆ ಮಂಚದ ಮೇಲೆ ಮಲಗಿಸಿ ಅಲ್ಲಿ ಕೂಡಿದ ಜನರಿಂದ ಮಹಾಸ್ವಾಮಿಯವರ ಭಜನಾದಿಗಳನ್ನು ಮಾಡಿ ಕೂಡಿದ ಜನರು ಮನೆಗೆ ಹೋದ ಮೇಲೆ ಮಹಾಸ್ವಾಮಿಯವರ ಕಾಲು ಹಿಚಿಕಿ ಪರಮಾತ್ಮನನ್ನು ಪ್ರಾರ್ಥಿಸಿ ಮಲಗುತ್ತಿದ್ದರು. ಈಪ್ರಕಾರ ಶಿದಲಿಂಗ ಸ್ವಾಮಿಯವರು ಸೇವೆಮಾಡುತ್ತಿರಲು ಒಮ್ಮೆ ಅವರು ಮಹಾಸ್ವಾಮಿಯವರಿಗೆ ಹಾಸಿಗೆ ಮಾಡುವಾಗ ಮಹಾಸ್ವಾಮಿಯವರು ಹೊರುವ ಒಂದು ಕಂಬಳಿಯ ಮೇಲೆ ಮನಸ್ಸು ಮಾಡಿದರು. ಆಗ ಮಹಾಸ್ವಾಮಿಯವರು ಅದನ್ನರಿತು ಶಿದಲಿಂಗ ದೇವರನ್ನು ಊರಲ್ಲಿ ಒಂದು ಕೆಲಸಕ್ಕೆ ಕಳುಹಿಸಿ ಅವರು ಬಂದಮೇಲೆ ಆ ಶಿದಲಿಂಗ ದೇವರು ಅಪೇಕ್ಷಿಸಿದ ಕಂಬಳಿಯನ್ನೇ ಇನಾಮಾಗಿ ಕೊಟ್ಟರು ಅದನ್ನರಿತ ಶಿದಲಿಂಗದೇವರು ಮಹಾಸ್ವಾಮಿಯವರು ಪರೇಂಗಿತಜ್ಞರೆಂದು ತಿಳಿದು ಕೊಂಡರು. ಅನಂತರ ಒಮ್ಮೆ ಮುರಗೋಡ ದೈವದವರು ಒಂದು ಧಾಬಳಿಯನ್ನು ಬಿಷ್ಟನ ಗೌಡರ ಮನೆಗೆ ಕಳಿಸಿ ಕೊಟ್ಟರು. ಅದನ್ನು ಗೌಡರು ಶಿದಲಿಂಗಪ್ಪನವರು ಬಿಕ್ಷೆಗೆ ಬಂದಾಗ ಅವರ ಕೈಯಲ್ಲಿ ಕೊಟ್ಟರು. ಅದನ್ನು ಮಠಕ್ಕೆ ಒಯ್ಯುವಾಗ ಶಿದಲಿಂಗದೇವರ ಮನಸ್ಸು ಅದರಮೇಲೆ ಆಯಿತು. ಈ ಪ್ರಕಾರ ಸಂಧಿಗ್ಧ ಮನಸ್ಸಿನಿಂದ ಹೊರಟ ಶಿದಲಿಂಗದೇವರಿಗೆ ಬಿಷ್ಟನಗೌಡರು ಹುಬ್ಬಳ್ಳಿ, ಮಹಾರುದ್ರಪ್ಪನವರು, ಶಿವಪುತ್ರಯ್ಯನವರು ಪರಕಾಳಿ, ವೀರಪ್ಪನವರು ಶಿದ್ಲಿಂಗಪ್ಪನವರಿಗೆ ಶಿದ್ಲಿಂಗಾ ನೀನು ಮುಪ್ಪಿನವನಾದೆ ಇನ್ನಾದರೂ ಗುರೂಪದೇಶವನ್ನು

ತೆಗೆದುಕೋ ಎಂದು ಉಪದೇಶಮಾಡಿದರು. ಈ ಪ್ರಕಾರ ಹೊಯ್ದಾಡುತ್ತ ಶಿದ್ಲಿಂಗಪ್ಪನವರು ಮಠಕ್ಕೆ ಬಂದು ಮನಸ್ಸಿಲ್ಲದೇ ದಾಬಳಿಯನ್ನು ಮಹಾಸ್ವಾಮಿಯವರ ಕೈಯಲ್ಲಿಕೊಟ್ಟರು. ಪರೇಂಗಿತಜ್ಞರಾದ ಮಹಾಸ್ವಾಮಿಯವರು ಶಿದ್ಲಿಂಗನ ಭಾವವನ್ನು ತಿಳಿದು ಶಿದ್ಲಿಂಗಾ ಗುರೂಪದೇಶವನ್ನು ಮಾಡುತ್ತೇನೆ ಮುದ್ದಿಯನ್ನು ಮಾಡೆಂದು ಆಜ್ಞಾಪಿಸಿದರು. ಮತ್ತು ರಾಮನಗೌಡರಿಗೆ ಈ ಅಯ್ಯ ಹೇಗೆ ಮುದ್ದಿ ಮಾಡುತ್ತಾನೆ ನೋಡೆಂದು ಹೇಳಿದರು. ಆಗ ರಾಮನಗೌಡರು ಶಿದ್ಲಿಂಗಾ ಮಹಾಸ್ವಾಮಿಯವರು ನಮ್ಮನ್ನು ಮಾಡುವರೆಂದು ಹೇಳಿ ಮಹಾಸ್ವಾಮಿಯವರಿಗೆ ಮುದ್ದಿಯನ್ನು ಸಿದ್ಧಮಾಡಿ ತಿಳಿಸಿದರು. ಆಗ ಮಹಾಸ್ವಾಮಿಯವರು ಶಿಷ್ಯರೇ ಇಂದು ಒಳ್ಳೇ ಯೋಗವಿದೆ. ಮುದ್ದಿಯಾಗಲೆಂದು ಹೇಳಿ ಸಕಲರನ್ನು ಕರೆಯಿಸಿ ಸಾಯಂಕಾಲ ಸಕಲರೆದುರಿಗೆ ತಮ್ಮ ನಿತ್ಯಕರ್ಮ ಮುಗಿದ ಮೇಲೆ ತಮ್ಮ ಆಸನದಲ್ಲಿ ಕುಳಿತರು. ಆಗ ಶಿದಲಿಂಗದೇವರು ಕಾಯಿಕರ್ಪೂರಗಳನ್ನು ತಂದಿಟ್ಟು ನಮಸ್ಕರಿಸಲು ಅವರನ್ನು ಕೈಪಿಡಿದು ಕೋಣೆಯಲ್ಲಿ ಕರೆದುಕೊಂಡು ಹೋಗಿ ಗುರುಮಂತ್ರೋಪದೇಶವನ್ನು ಮಾಡಿ ಅವಿಗೆ ಜೋಳಿಗಿ ನವಿಲುಗರಿಗಳನ್ನು ಕೊಟ್ಟು ವರದ ಹಸ್ತವನ್ನು ಇಟ್ಟು ಉದ್ಧಾರವಾಗಿರೆಂದು ಆಶೀರ್ವದಿಸಿ ಭಜನ ಪೂಜೆ ನೈವೇದ್ಯಗಳಿಂದ ತೃಪ್ತಿಬಡಿಸಿದರು.

ಮಹಾಸ್ವಾಮಿಯವರ ಮುಖ್ಯ ಭಕ್ತರಲ್ಲಿ ಅತಿ ಶ್ರೇಷ್ಠರು ಮುದೇನೂರ ಕರಿಗೌಡರು. ಈ ಮಹಾನುಭಾವರು ಸಕಲಶಾಸ್ತ್ರ ಪಾರಂಗತರೂ, ತತ್ವಜ್ಞಾನಿಗಳು, ಇವರು ಮಹಾಸ್ವಾಮಿಯವರ ಹೆಸರನ್ನು ಕೇಳುತ್ತಲೇ ಇದ್ದರು. ಇವರು ಮಹಾಸ್ವಾಮಿಯವರು ಒಕ್ಕುಂದದಲ್ಲಿರುವಾಗ್ಗೆ ಅವರ ದರ್ಶನಕ್ಕಾಗಿ ತನ್ನ ಸಕಲ ವೈಭವದೊಂದಿಗೆ ಬಂದರು. ಆಗ ಇವರು ಮಹಾಸ್ವಾಮಿಯವರ ಶಾಸ್ತ್ರಗಳನ್ನು ಕೇಳುತ್ತ ಮೂರುದಿನಗಳವರೆಗೆ ಅವರ ದರ್ಶನವಾಗದೆ ಹಾಗೆ ಕುಳಿತರು. ಆಮೇಲೆ ಮೂರನೇದಿನ ಮಹಾಸ್ವಾಮಿಯವರು ತಾವಾಗಿಯೇ ನೀನು ಯಾರು ಎಂದು ಕೇಳಿದಾಗ ತನ್ನ ಹೆಸರನ್ನು ಹೇಳಿದರು. ಆಗ ಸ್ವಾಮಿಯವರು ನಿನಗೇನು ಬರುತ್ತದೆ ಎಂದು ಕೇಳಲಾಗಿ ನಾನು ನಿಜಗುಣಿ ಶಿವಯೋಗಿಗಳ ಕೈವಲ್ಯವನ್ನು ಓದಿರುತ್ತೇವೆ ಎಂದು ಹೇಳಿದರು.

ಆದಕ್ಕೆ ಮಹಾಸ್ವಾಮಿಯವರು ಅವರನ್ನು ಒಂದು ಪದವನ್ನು ಹಾಡಲಿಕ್ಕೆ ಹಚ್ಚಿದರು. ಅವರು ರುಚಿಕಟ್ಟಾಗಿ ಹಾಡಿದ್ದರಿಂದ ಅವರಿಗೆ ಆಶೀರ್ವದಿಸಿ ಕಳುಹಿಸಿ ಕೊಟ್ಟರು.

ಮಹಾಸ್ವಾಮಿಯವರು ಗರಗದಲ್ಲಿದ್ದಾಗ ಗರಗದ ಹತ್ತಿರ ಕೊಟಬಾಗಿ ಎಂಬ ಗ್ರಾಮದಲ್ಲಿಯ ಯಲಿಗಾರ ಮಾಳವ್ವನೆಂಬ ಮುದುಕಿ ೩ ತನಗೆ ಮಕ್ಕಳಿಲ್ಲದ್ದರಿಂದ ಮಹಾಸ್ವಾಮಿಯವರಿಗಾಗಿ ತನ್ನ ಐದು ಎಕರೆ ಹೊಲವನ್ನು ಉದಾರ ದಾನ ಮಾಡಿದಳು.

ಒಂದುದಿವಸ ಹುಬ್ಬಳ್ಳಿಯಲ್ಲಿರುವ ಶಿದ್ಧಾರೂಢಸ್ವಾಮಿಯವರು ಮಡೀವಾಳೇಶ್ವರರ ದರ್ಶನಕ್ಕೆ ಬಂದು ಕಾಯಿ ಕರ್ಪುರವನ್ನಿಟ್ಟು ನಮಸ್ಕರಿಸಲು ನೀನು ಯಾರೆಂದು ಮಹಾಸ್ವಾಮಿಯವರು ಪ್ರಶ್ನೆಮಾಡಿದರು. ಆದಕ್ಕೆ ಶಿಧ್ಧಾರೂಢರು ನನಗೆ ಜನರು ಆರೂಢನೆಂದು ಕರೆಯುವರು ಆದರೂ ಮಹಾಸ್ವಾಮಿಯವರು ನಿನಗೆ ನಿಮ್ಮ ತಂದೆ ತಾಯಿಗಳು ಇಟ್ಟ ಹೆಸರು ಏನು ? ನಿನ್ನ ಊರು ಯಾವದು ಎಂದು ಕೇಳಿದರು. ಆದಕ್ಕೆ ಶಿದ್ಧಾರೂಢರು ನನ್ನ ಹೆಸರು ಶಿದ್ದಪ್ಪಾ ಬಿದರಿಕೋಟಿ ಎಂದು ಉತ್ತರ ಕೊಟ್ಟರು. ಆದಕ್ಕೆ ಸ್ವಾಮಿಯವರು ನೀನು ಎಲ್ಲಿ ಇರುವಿ ಎಂದು ಕೇಳಲು ಹುಬ್ಬಳ್ಳಿಯಲ್ಲಿ ಇರುವೆನು. ಎಂದು ಉತ್ತರ ಕೊಟ್ಟರು. ಅದಕ್ಕೆ ಶ್ರೀಗಳು ಅವರು ಅಲ್ಲಿ ಇರುವರು ಆದರೆ ಬಹಳ ಎಚ್ಚರದಿಂದ ಇರು ಅಲ್ಲಿಯ ಜನರು ಬಹಳ ಬೆರಕಿ ಒಂದನ್ನು ಒಂಬತ್ತನ್ನು ಮಾಡಬಲ್ಲರು. ನಿನ್ನನ್ನು ಆನೆಯಮೇಲೆ ಮೆರೆಯಿಸಿ ಅಂಬಾರಿಯಲ್ಲಿ ಕೂಡ್ರಿಸಿ ಕೈಬಿಡುವರು. ಎಚ್ಚರಿಕೆ ಜನತೆಯ ಸಂಪರ್ಕ ಬಹಳವಿಡಬೇಕು ಎಂದು ಹೇಳಿದರು. ಇಷ್ಟೆಲ್ಲವನ್ನು ಹೇಳಿದ ಮೇಲೆ ಮಹಾಸ್ವಾಮಿಯವರು ಅವರನ್ನು ಆಶೀರ್ವದಿಸಿ ಕಳಿಸಿಕೊಟ್ಟರು.

ಮುಂದೆ ಕೆಲ ದಿನಗಳ ಮೇಲೆ ಮಹಾಸ್ವಾಮಿಯವರು ತಮ್ಮ ಆಯುಷ್ಯದ ಅಂತ್ಯವನ್ನು ಕಾಣಲಾರಂಭಿಸಿದರು. ಈ ರೀತಿ ಆಯುಷ್ಯದ ಅಂತ್ಯವನ್ನು ಕಂಡ ಸ್ವಾಮಿಯವರು ಒಂದು ದಿವಸ ತಮ್ಮ ಭಕ್ತಮಂಡಳಿಯ ಮುಂದೆ ತಮ್ಮ ಕೈಲಾಸ ಗಮನದ ಸುದ್ದಿಯನ್ನು ಹೇಳಿದರು. ಆಗ ಮಹಾಸ್ವಾಮಿಯವರ ಭಕ್ತಶ್ರೇಷ್ಠರಾದ ಮುದೇನೂರ ಕರಿಗೌಡರು ಸ್ವಾಮಿಯವ

ರಿಗೆ ದೇಹವನ್ನು ತಮ್ಮ ಊರಲ್ಲಿ (ಮುದೇನೂರಲ್ಲಿ) ಇಡಬೇಕೆಂದು ಬೇಡಿಕೊಂಡರು. ಅದಕ್ಕೆ ಸ್ವಾಮಿಯವರು ಸಮಾಧಿಯನ್ನು ಕಟ್ಟಿಸಿ ಕರೆಯಲಿಕ್ಕೆ ಬರಬೇಕೆಂದು ಆಜ್ಞಾಪಿಸಿದರು. ಮಹಾಸ್ವಾಮಿಯವರ ಅಪ್ಪಣೆಯಂತೆ ಕರಿಗೌಡರು ತಮ್ಮ ಊರಿಗೆ ಹೋಗಿ ಸಮಾಧಿಯನ್ನು ಸಿದ್ಧಗೊಳಿಸಿ ಕರೆಯಲಿಕ್ಕೆ ಬಂದರು. ಕರಿಗೌಡರು ಬಂದು ಸ್ವಾಮಿಯವರಿಗೆ ಬಿನ್ನಯಿಸಿಕೊಂಡಾಗ ಸ್ವಾಮಿಯವರ ಕರಿಗೌಡ ಅದರ ಕಾಲವಿನ್ನೂ ಬಂದಿಲ್ಲಾ. ಕಾರಣ ಆ ಸಮಾಧಿಯನ್ನು ಈ ಕಾಯಿ ಹಾಕಿ ಮುಚ್ಚು ಎಂದು ಹೇಳಿ ಒಂದು ಕಾಯಿಯನ್ನು ಕೊಟ್ಟರು. ಶ್ರೀಗುರುವಿನ ಆಜ್ಞೆಯಂತೆ ಕರಿಗೌಡರು ಕಾಯಿ ತಗೆದುಕೊಂಡು ಹೋಗಿ ಪ್ರೇಮದಿಂದ ಶ್ರೀಗುರುವೆಂದೇ ಮುಚ್ಚಿಸಿದನು.

ವಾಚಕರೇ ? ಇಲ್ಲಿಯವರೆಗೆ ಸದ್‌ಗುರುವಿನ ಕಥೆಯನ್ನು ಕೇಳಿ ವಿಚಿತ್ರರಾದ ತಾವು ಇನು ಮಹಾಸ್ವಾಮಿಯವರ ಪರಲೋಕ ಗಮನದ ವೈಶಿಷ್ಟ್ಯೆಯನ್ನು ನೋಡಿ ಆಶ್ಚರ್ಯಚಕಿತರಾಗಬಹುದು. ಮಹಾಸ್ವಾಮಿಯವರು ಒಂದು ದಿವಸ ಹಂಗರ್ಕೆಯಿಂದ ಅಯ್ಯಪ್ಪ ದೇಸಾಯರನ್ನೂ, ಗರಗದ ಬಿಸ್ಣನಗೌಡರನ್ನೂ, ಕರೆಯಿಸಿ ಭಕ್ತರೇ ನಾವು ಇನ್ನು ಈ ಲೋಕದಲ್ಲಿ ಇರಲಾರೆವು ನಮ್ಮ ಗದ್ದುಗೆಯನ್ನು ತಯಾರಿಸಿರಿ ಎಂದು ಹೇಳಲಾಗಿ ಶ್ರೀಮಂತ ಅಯ್ಯಪ್ಪ ದೇಸಾಯರು ಸಾವಿರಗಟ್ಲೆ ದುಡ್ಡು ಖರ್ಚುಮಾಡಿ ಸ್ವಾಮಿಯವರ ಸಮಾಧಿಯನ್ನು ತಯಾರಿಸಿದರು. ಆ ಮಹಾಸ್ವಾಮಿಯವರು ದಿನದಿನಕ್ಕೆ ತಮ್ಮ ದೇಹದ ಮೇಲಿನ ಆಶೆಯನ್ನು ಬಿಡಲಾರಂಭಿಸಿದರು.

ಆಗ ಅವರ ದೇಹವು ಜಡವಾಗಲಾರಂಭಿಸಿತು. ಒಂದು ದಿವಸ ಅವರು ಮಠದಲ್ಲಿಯ ಮರಿಯನ್ನು ಕರೆದು ಅವರಿಗೆ ಆಶೀರ್ವದಿಸಿ ಒಬ್ಬೊಬ್ಬರಿಗೆ ಒಂದೊಂದು ಬೊಗಸೆ ರೂಪಾಯಿಗಳನ್ನು ಕೊಟ್ಟು ನಾವು ಪರಲೋಕಕ್ಕೆ ಹೋಗುತ್ತೇವೆಂದು ಹೇಳಿದರು.

ಆ ಮೇಲೆ ಅಜ್ಜಾ ಬಾಬಾರೇ ಜೈಯೆಂದು ಗುರುವಿನ ನಾಮಸ್ಮರಣೆ ಮಾಡಿ ತಮ್ಮ ಮರಿದೇವರಿಗೆ ತಾವು ತಿರುಗಾಡಿದ ತೀರ್ಥಕ್ಷೇತ್ರಗಳ ಹೆಸರು ಹೇಳಿದರು ಅವು ಕೆಳಗಿನಂತಿವೆ. ೧. ಕಾಶಿ, ೨ ಕಲಕತ್ತಾ, ೩. ನಾಶಿಕ, ೪. ಬದ್ರಿನಾರಾಯಣ, ೫. ಕಾಶ್ಮೀರ, ೬. ಗೋಕುಲ, ೭. ದ್ವಾರಕಾ, ೮. ಅಯೋಧ್ಯಾ, ೯. ನೇಪಾಳ, ೧೦. ಹಿಮಾಲಯ, ೧೧. ರಾಮೇಶ್ವರ, ೧೨.

ಮಧುರಾ, ೧೩. ಮೀನಾಕ್ಷಿ, ೧೪. ಕುಂಭಕೋಣ, ೧೫. ಶ್ರೀರಂಗನಾಥ, ೧೬ ಕಂಚಿಕಾಮಾಕ್ಷಿ, ೧೭. ವೆಂಕಟರಮಣ ಗಿರಿ, ೧೮. ನಂಜುಂಡೇಶ್ವರ ೧೯. ಚಾಮುಂಡಾಂಬೆ, ೨೦. ತಿರುವಾಳ ತ್ಯಾಗರಾಜೇಶ್ವರ, ೨೧. ಚಾಮುಂಡಿ ೨೨. ಸುವರ್ಣವತಿ, ೨೩. ಶ್ರೀಶೈಲ, ೨೪. ಶಂಭುಲಿಂಗನ ಭೆಟ್ಟ, ೨೫. ನರ ಚಾಲಯ್ಯನಮಠ, ೨೬ ಮಲೆಮಾಂಚೇಶ್ವರ, ೨೭. ಕುಂತೂರ ಪ್ರಭು ಸ್ವಾಮಿ, ೨೮. ಹಿಮದ ಗೋಪಾಳ ತಲಮಲದೇಶ, ೨೯. ಗೋಕರ್ಣ, ೩೦. ಉಳವಿ, ೩೧. ಜಗನ್ನಾಥ, ೩೨. ಆವಡಿನಾಗನಾಥ, ೩೩. ಪರಳಿ ವೈಜನಾಥ, ೩೪. ಹಂಪಿ ವಿರುಪಾಕ್ಷೇಶ್ವರ, ೩೫. ವಿಠೋಬಾ, ೩೬. ದೇವು, ೩೭. ಆಳಂದಿ, ೩೮. ತ್ರ್ಯಂಬಕೇಶ್ವರ, ೩೯. ಪಂಚವಟಿ, ೪೦. ಮಕ್ಕಾ, ಮದೀನಾ, ೪೨. ಭೂತಾನ, ೪೩. ಗಯಾ, ೪೪. ಪ್ರಯಾಗ, ೪೫. ಭಮರಾಯ, ೪೬. ಜ್ವಾಲಾ ಮುಖಿ, ೪೭. ರಕ್ತವಾಹಿನಿ, ೪೮. ಮುಂಬಯಿ, ೪೯. ಸೊಲ್ಲಾಪೂರ, ಸಿದ್ಧ ರಾಮೇಶ್ವರ, ೫೦. ರೇಣುಕಾ, ೫೧. ಯಡವೂರ ವೀರಭದ್ರದೇವರು, ೫೨. ವೃಂದಾವನ, ೫೩. ಅಹೋಬಲ ನರಶಿಂಹ, ೫೪ ಕೂಡಲಸಂಗಮನಾಥ, ೫೫. ಜಂಬುಕೇಶ್ವರ, ೫೬. ವಿಷ್ಣುಕಂಚಿ, ೫೭. ಶಿವಕಂಚಿ, ೫೮ ಹಂಡಿಬಡಗ ನಾಥ, ೫೯. ರಜತಾದ್ರಿ, ೬೦. ಸೋಮಶೇಖರೇಶ್ವರ, ೬೧. ಸೊಗಲದ ಸೋಮನಾಥ, ೬೨. ಮೈಲಾರಲಿಂಗ, ೬೩. ದತ್ತಾತ್ರೇಯ, ೬೪. ಭಗ ಳಾಂಭಿಕಾ, ೬೫ ಭೀಮಾಶಂಕರ, ೬೬. ಮಧುಕೇಶ್ವರ, ೬೭ ಸೊಂಡೂರ ಕಾರ್ತಿಕ, ೬೮ ಓಂಕಾರ ಚಾಮರೇಶ್ವರ, ೬೯. ಸೇತುಬಂಧನ ರಾಮೇಶ್ವರ, ೭೦. ಗೋಕ್ಷೀರ ಸುರಸಿನಿಲಯ, ೭೧. ಉಜ್ಜಯನಿ ಮಹಾಂಕಾಳಿ ಮುಂತಾದ ಕ್ಷೇತ್ರಗಳೆಂದು ಮರಿದೇವರಿಗೆ ಹೇಳಿ ಆಶೀರ್ವದಿಸಿ ಜನರಿಗೆ ವಿಭೂತಿ ಮೊದಲಾದವುಗಳನ್ನು ದಾನ ಮಾಡಲಾರಂಭಿಸಿದರು ಆ ನಂತರ ಮಹಾ ಸ್ವಾಮಿಯವರು ಕೆಲದಿನ ಮರಿದೇವರಿಂದ ನೀರು ತರಿಸಿ ದಿನಾಲು ಸ್ನಾನ ಮಾಡಿ ಮರಿದೇವರು ತಂದ ನೀರನ್ನೆ ಕುಡಿದು ಇರಲಿಕ್ಕೆ ಆರಂಭಿಸಿದರು.

ಶ್ರೀ ಶಾಲಿವಾಹನ ಶಕೆ ೧೮೦೧ನೇ ಮಾಘ ಶುದ್ಧ ೮ನೇ ದಿವಸದಿಂದ ಮಾಘ ಬಹುಳ ಪ್ರತಿಪದೆಯುವರೆಗೆ ಪ್ರತಿವರ್ಷ ಸಮಾಧಿಗೆ ನೈವೇದ್ಯ ಮಾಡಿ ಸೆಂದು ತೋಟದ ಶಿದಲಿಂಗೇಶ್ವರರಿಗೆ ಆಜ್ಞೆಮಾಡಿ ಪ್ರಮುಖ ದೈವದವರನ್ನು ಕರೆಯಿಸಿ ಇಂದು ಗುರುವಾರ ಸಾತೆಯಲ್ಲಿ ಸಕಲಸಾಹಿತ್ಯಗಳನ್ನು ತಂದು

ಅಡಿಗೆ ಮಾಡಿಸಿ ಪ್ರಸಾದ ತೆಗೆದುಕೊಳ್ಳಲಿಕ್ಕೆ ಆಜ್ಞೆಮಾಡಿದರು. ಅದಕ್ಕೆ ಆ ದೈವದವರು ತಾವು ಪ್ರಸಾದವನ್ನು ತಕ್ಕೊಂಡರೆ ಮಾಡುವೆವೆಂದು ಹೇಳಿದರು. ಅದಕ್ಕೆ ಶ್ರೀಗಳು ನಾನು ಹೇಳಿದಂತೆ ನೀವು ಮಾಡಿರೆಂದು ಹೇಳಲಾಗಿ ಅದಕ್ಕೆ ಸ್ವಾಮಿಯವರು ಪರಕಾಳಿ ಮುರಗೆಪ್ಪನವರ ಮನೆಯಿಂದ ಅಡಿಗೆ ಮಾಡಿಸಿ ತರಿಸಿ "ಶಿವ ಬಿಲ್ವ ಉಮರೇಶ್ವರ ಅಜ್ಜಾ ಬಾಬಾರೇ ಜೈ"ಯೆಂದು ಗುರುವಿನ ನಾಮಸ್ಮರಣೆ ಮಾಡಿ ಎಲ್ಲರಿಗೂ ಊಟಮಾಡಲು ಆಜ್ಞಾಪಿಸಿದರು ಅದರಂತೆ ಎಲ್ಲರೂ ಊಟಮಾಡಿದರು ಅದೇ ಪದ್ಧತಿಯು ಇಂದಿನ ವರೆಗೆ ರಥೋತ್ಸವದ ದಿವಸ ನಡೆಯುತ್ತದೆ. ಆನಂತರ ಸ್ವಾಮಿಯವರು ತಮ್ಮ ಪರಲೋಕದ ಪ್ರಯಾಣದ ಸಿದ್ಧತೆಯನ್ನು ಅತಿ ಸಂಭ್ರಮದಿಂದ ಯಾವ ಕುಂದುಕೊರತೆಗಳಿಲ್ಲದಂತೆ ಮಾಡಲಿಕ್ಕೆ ಹೇಳಿ ಬಸವೇಶ್ವರನ ಗುಡಿಯಲ್ಲಿ ರಂಗವಲ್ಲಿಯಿಂದ ನೆಲವನ್ನು ಶ್ರಿಂಗರಿಸಿ ಗದ್ದಿಗೆಯ ಮೇಲೆ ಪದ್ಮಾಸನ ಹಾಕಿಕೊಂಡು ಕುಳಿತು ಓಂಕಾರ ನಾಮಪಠಣ ಮಾಡಲಾರಂಭಿಸಿದರು. ಜನರಿಗೆ ಭಜನೆ ಮಾಡಲು ಹೇಳಿದು. ಅವರ ಭಜನೆಯು ಒಳ್ಳೇ ಭರಭರಾಟಿಯು ಮಾಘ ಬ|| ೩ ದಿವಸ ಮುಂಜಾನೆ ಒಂಭತ್ತು ಗಂಟೆಗೆ ಸ್ವಾಮಿಯವರು ಜಯ ಜಯ ನಮಃ ಪಾರ್ವತಿ ಪತಿ ಹರಹರ ಮಹಾದೇವ ಎಂಬ ನಾಮಸ್ಮರಣೆಯನ್ನು ಮಾಡುತ್ತಾ ಬ್ರಹ್ಮಸ್ಥಾನದಿಂದ ಪ್ರಾಣವಾಯುವನ್ನು ಪರಲೋಕಕ್ಕೆ ಬಿಟ್ಟರು. ಅವರ ಪ್ರಾಣವಾಯುವು ಹಾರಿದರೂ ದೇಹವು ಮಾತ್ರ ಸಜೀವದಂತೆ ಇತ್ತು. ಅದನ್ನು ಸಕಲ ವೈಭವದಿಂದ ಶ್ರಿಂಗರಿಸಿ ರಥವನ್ನು ಸಿದ್ಧೀಪಡಿಸಿ ಅವರನ್ನು ರಥದಲ್ಲಿ ಕೂಡ್ರಿಸಿ ಊರ ತುಂಬಾ ಮೆರವಣಿಗೆ ಮಾಡಿ ಸ್ವಾಮಿಯವರ ದೇಹವನ್ನು ಮೊದಲೇ ಸಿದ್ಧವಾಗಿದ್ದ ಸಮಾಧಿಯಲ್ಲಿ ಮುಚ್ಚಿದರು. ಅವರು ಮುಚ್ಚುವದಕ್ಕೂ ಸ್ವಾಮಿಯವರ ಕೇವಲ ಭಕ್ತ ಸವದತ್ತಿ ಮಹಾರುದ್ರಪ್ಪನು ರೋಧನ ಮಾಡುವ ಧ್ವನಿಕೇಳಿಸಿತು. ಆಗ ಆ ಭಕ್ತನು ಬಂದು ಎಲ್ಲರನ್ನು ನೋಡುತ್ತಿರಲು ಸಮಾಧಿಯ ಮೇಲೆ ಉರಳಾಡಲಾರಂಭಿಸಿದನು. ಆಗ ಅಲ್ಲಿಯ ಜನರು ಅವನನ್ನು ಶಾಂತ ಮಾಡಿ ಕಳುಹಿಸಿದರು.



# ಉಪಸಂಹಾರ



ನೋಡಿ ವಾಚಕಮಹಾಶಯರೇ, ಪರಶಿವ ಸ್ವರೂಪಿಯಾದ ಮಹಾತ್ಮರು ಜನ್ಮದಾರಭ್ಯ—ಅಂತ್ಯದವರೆಗೆ ತಮ್ಮ ಅಘಟಿತ ಕಾರ್ಯಗಳನ್ನು ಜಗಕ್ಕೆ ತೋರಿಸಿ ಜಗದ ಜನರನ್ನು ಉದ್ಧರಿಸಿ ಮಹಾತ್ಮರೆಂಬ ಹೆಸರು ಪಡೆದರು. ಮುಕ್ತಿಮಾರ್ಗದ ಮುಖ್ಯ ಕಾರಣವಾದ ಯೋಗಸಾಮರ್ಥ್ಯದಿಂದ ಜಗತ್ತನ್ನು ಬೆಳಗುವವರು ಅನೇಕರು. ಆದರೆ ಮಾನವ ಪ್ರಪಂಚದ ಜನರಲ್ಲಿ ಬೆರೆತರೂ ನಿರ್ಲಿಪ್ತರಾಗಿ ತಮ್ಮ ಗುರಿಯನ್ನು ಸಾಧಿಸುವ ಮಹಾತ್ಮರು ತೀರ ವಿರಳ

ಜನ್ಮದಾರಭ್ಯ ತನ್ನ ಸಾಕು ತಂದೆಗಳಿಗೆ ತನ್ನ ಲೀಲೆ ತೋರಿಸಿ ಅವರ ಮನದಾನಂದವನ್ನುಂಟುಮಾಡಿ ನಂತರ ಯಾವ ಗುರುವಾಶೀರ್ವಾದದಿಂದ ಸ್ಥಾಪಿಸಲ್ಪಟ್ಟ ಕಿತ್ತೂರ ಸಂಸ್ಥಾನದ ಮೇಲೆ ತನ್ನ ಪ್ರಬಲ ಕೋಪಾಗ್ನಿಗೆ ಕೊತ್ತಿದ ಶಾಪರೂಪಿ ಕಿಡಿಯನ್ನು ಉಗಳಿ ಅದನ್ನು ಭಸ್ಮಿಭೂತ ಮಾಡಿದರು. ಮುಂದೆ ಯೋಗೀಂದ್ರರಾದ ತಾವು ಮಾಡಿದ ಕಾರ್ಯಕ್ಕಾಗಿ ಪ್ರಾಯಶ್ಚಿತ್ತರೂಪಿ ದಿಗಂಬರ ಸ್ವರೂಪವನ್ನು ಆ ಜನ್ಮ ಪರಿಯಂತ ಧರಿಸಿ ತಮ್ಮ ಮುಕ್ತಿಮಾರ್ಗಕ್ಕೆ ಸಾಧನವಾದ ತೀರ್ಥಕ್ಷೇತ್ರಗಳನ್ನು ತಿರುಗುತ್ತ ದೇವದರ್ಶನ ಹೊಂದುತ್ತ ತಮ್ಮ ಲೀಲೆಯನ್ನು ಜಗತ್ತಿಗೆ ತೋರಿಸುತ್ತ ವಿಶ್ವವಿದ್ಯಾವಂತರೆಂದು ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಹೊಂದಿದರು

ಈ ರೀತಿ ಜಗದ್ವಿಖ್ಯಾತರಾದ ಮಹಾಸ್ವಾಮಿಯವರು ತಮ್ಮ ಲೀಲಾಪ್ರಭಾವದಿಂದ ಜಗತ್ತನ್ನೇ ಬೆಳಗಿ ನಿಜಾಮ-ನೇಪಾಳದಂಥಾ ಶ್ರೇಷ್ಠ ಅರಸರಿಂದ ಸನ್ಮಾನ ಹೊಂದಿ, ಮುಟ್ಟಲಶಕ್ಯವಾದ ಕೈಲಾಸಗಿರಿಯನ್ನು ಹತ್ತಿ, ಕೀರ್ತಿಶಾಲಿಗಳಾದ ಮಹಾತ್ಮರಾದರು.

ಜಗತ್ತಿನ ಮುಖ್ಯ ಧರ್ಮಶಾಸ್ತ್ರಗಳು ಶ್ರೇಷ್ಠವೆಂದು ಬೋಧಿಸುವ ಬ್ರಹ್ಮಚರ್ಯದ ತೇಜೋಬಲವೇ ಮಡಿವಾಳೇಶ್ವರ ಚರಿತ್ರೆಯ ಪುಣ್ಯ

ಪ್ರಭಾವಕ್ಕೆ ಮುಖ್ಯ ಕಾರಣವೆಂದು ನಮ್ಮ ವಾಚಕರು ಮನಗಂಡಿರಬಹುದು. ಮಹಾತ್ಮರ ಮಾನವ ಶಕ್ತಿಯು ರೂಪದ ಪ್ರತಿಬಿಂಬದ ಅದ್ಭುತ ಶಕ್ತಿಯು ಅವರ ಬ್ರಹ್ಮಚರ್ಯದ ತೇಜೋಬಲದಲ್ಲಿ ಒಡೆದು ಕಾಣುತ್ತಿತ್ತು. ಈ ಪುಣ್ಯ ವಂತ ಮಹಾತ್ಮರು ಆಗಾಗ್ಗೆ ತೋರಿದ ಶಕ್ತಿಗಳು ಬ್ರಹ್ಮಚರ್ಯ ತೇಜೋ ಬಲವು ಜಗತ್ತಿನ ಚರಾಚರ ವಸ್ತುಗಳ ಗತಿಯನ್ನು ಸಹ ಬದಲಿಸಲು ಶಕ್ಯ ವಿದೆ 'ಎಂಬ'ದನ್ನೂ ಸಿದ್ಧಮಾಡಿವೆ. ಮಾನವನು ಪ್ರಪಂಚದ ಜನರಲ್ಲಿ ಬೆರೆ ತರೂ ನಿರ್ಲಿಪ್ತನಾಗಿ ನಿಗಮಗಳಿಗೆ ನಿಲುಕದ ದೇವಾಧಿದೇವನನ್ನು ಕಾಣಲು ಯತ್ನಿಸಿದ ಮಹಾತ್ಮರಲ್ಲಿ ನಮ್ಮ ಮಡಿವಾಳಸ್ವಾಮಿಯವರು ಒಬ್ಬರು.

ಜಗತ್ತಿನಲ್ಲಿ ಪರಮಾತ್ಮನ ನಾಮಮಾತ್ರದಿಂದಿ ಮುಕ್ತಿಯಾಗುವ ರೆಂದು ಮನುಸ್ಮೃತಿಗಳು ಸಾರಿಸಾರಿ ಹೇಳುತ್ತವೆ. ಅಂದಮೇಲೆ ಅಖಂಡ ಬ್ರಹ ಚರ್ಯದಿಂದ ಜಗತ್ತನ್ನು ಬೆಳಗಿದ ದೇವಾಂಶರಾದ ಮಹಾತ್ಮಮಡಿವಾಳೇಶ್ವ ರರ ಚರಿತ್ರ ಪಠಣದಿಂದ ಶ್ರೀಗುರುವು ಮುಕ್ತಿಯನ್ನು ನೀಡಲಿ ಎಂದು ಗುರು ವಿನಲ್ಲಿ ಬೇಡುವೆ.

ಅನಾದಿ ಕಾಲದಿಂದಲೂ ಅನಂತರೂಪ ಧರಸಿದ ಧರ್ಮ ರಕ್ಷಿಸಿದ ಗುರು ವರನು ಕಾಲಕಾಲಕ್ಕೆ ಧರ್ಮೋದ್ಧಾರಕ್ಕಾಗಿ ಅವತರಿಸಿ ಜಗತ್ತನ್ನು ಉದ್ಧರಿ ಸಿದನು. ಅದೇ ರೀತಿ ಮಹಾತ್ಮಮಡಿವಾಳ ಸ್ವಾಮಿಗಳು ತಮ್ಮ ಲೀಲೆಯಿಂದ ಜಗತ್ತಿನಲ್ಲಿಯ ಜನರಿಗೆ ಧರ್ಮಮಾರ್ಗ ಬೋಧಿಸಿದರು. ಪುಣ್ಯವಂತ ಪಠಣಯೋಗ್ಯವಾದ ಮಹಾತ್ಮರ ಚರಿತ್ರೆಯನ್ನು ಓದುವ ವಾಚಕರಿಗೆ ಶ್ರೀಗುರು ಮಡಿವಾಳೇಶ್ವರರು ಮುಕ್ತಿಯನ್ನು ನೀಡಲೆಂದು ಸದಾಸದ್ಗುರು ವನ್ನು ಪ್ರಾರ್ಥಿಸಿ ಮತ್ತೊಮ್ಮೆ ಚರಿತ್ರೆಯಲ್ಲಿಯ ಲೋಪಧೋಷಗಳಿಗೆ ಓದು ಗರಲ್ಲಿಯೂ ಶ್ರೀಗುರುವಿನಲ್ಲಿ ಕ್ಷಮೆಬೇಡಿ ಈ ಚರಿತ್ರೆಯನ್ನು ಮುಗಿಸಿ ಪುನರಾವೃತ್ತಿಗೆ ಪ್ರೋತ್ಸಾಹಿಸುವರೆಂದು ಓದುಗರನ್ನು ಶ್ರೀಗುರುವನ್ನು ನಂಬಿ ಚರಿತ್ರೆಯನ್ನು ಮುಗಿಸುವೆ.

---

# ನೂರೆಂಟು ನಾಮಾವಳಿಗಳು



ಶ್ರೀಗುರುಭ್ಯೋನಮಃ
ಗುರುಸ್ವರೂಪಾಯನಮಃ
ರುಧಿರಾಕ್ಷರಾಯನಮಃ
ಮಹೇಶ ಸುತಾಯನಮಃ
ಡಿಂಭಕೇಶ್ವರಾಯನಮಃ
ವಾಣಿಸುತಾಯನಮಃ
ಳೇಪನ ಸ್ವರೂಪಾಯನಮಃ
ಶ್ವರಬಂಧುವಾಯನಮಃ
ರಜಪುತಾದ್ರಿ ಸಾಂಬಾರಾಯನಮಃ
ಪ್ರಮಥ ಗಣಸೇನಾಧಿನಾಯ
ಕಾಯನಮಃ
ಸತ್ಯ ವಾಕ್ಯಾಯನಮಃ
ನ್ನಗ್ನರೂಪಾಯನಮಃ
ಕಿಂಕ ಅರುಣಾಯನಮಃ
ಕಿತ್ತೂರ ಭೂಷಿತಾಯನಮಃ
ರಮಣೀಯ ರೂಪಾಯನಮಃ
ಕರುಣಾ ಸಮುದ್ರಾಯನಮಃ
ಮಮಕಾರ ನಾಶಾಯನಮಃ
ತಾಣಾಧಿಪತಿಯೇಯನಮಃ
ಧೀರರೂಪಾಯನಮಃ
ಶಂಬುಸುತಾಯನಮಃ

ನಗರದೇವಾಯನಮಃ
ಮಾರ್ತಾಂಡರೂಪಾಯನಮಃ
ಧಿರೇಶಾಯನಮಃ
ಗಂಭಿರೂಪಾಯನಮಃ
ರಕ್ಷಣದೇವಾಯನಮಃ
ಗಜಮುಖಬಿಂಧುವಾಯನಮಃ
ಓಂಕಾರರೂಪಾಯನಮಃ
ನಮಸ್ಕಾರ ಪ್ರೀತಾಯನಮಃ
ಮಹಾದೇವಾಯನಮಃ
ಶಿವಸುತಾಯನಮಃ
ವಾಚಾನ್ವಸ್ವರೂಪಾಯನಮಃ
ಯಕ್ಷಗಾನ ಪ್ರಿತಾಯನಮಃ
ಪ್ರಭು ಕುಮಾರಾಯನಮಃ
ಬಾಪು ವೈರಾಯನಮಃ
ನಾಗಲಾಂಬೆನು ತಾಯನಮಃ
ಚನ್ನಬಸವ ಶಿವಾಯನಮಃ
ಕಿತ್ತೂರ ಸಂಸ್ಥಾನನಾಶಾಯನಮಃ
ಮಲ್ಲಣ ದೇವಾಯನಮಃ
ಸೊಗಲಪುರವಾಸಾಯನಮಃ
ವಿಶ್ವಪುರವಾಸಾಯನಮಃ
ವಿಶ್ವಪಂಡಿತ ವಿಜಯಾಯನಮಃ

ವಿಶ್ವೇಶಾಯುನಮಃ
ಶಿದ್ಧಮಲ್ಹಾರ ಮಿತ್ರಾಯುನಮಃ
ನಾಗಲಿಂಗ ಸಖಾಯುನಮಃ
ಬ್ರಹ್ಮರಾಕ್ಷಸುದ್ಧಾರಣಾಯುನಮಃ
ರಾಮನಗೌಡ ದೇವಾಯುನಮಃ
ದಕ್ಷಯುಜ್ಞ ಗಂಧಾಯುನಮಃ
ಚಿದಂಬರ ಕುವರಾಯುನಮಃ
ವೀರೇಶಾಯುನಮಃ
ಸದ್ಗುರುವಾಯುನಮಃ
ಮಹತ್ವಾಯುನಮಃ
ಮಮಕಾರ ನಾಶಾಯುನಮಃ
ಗೊಣ್ಣುರಯುಜ್ಞಪ್ರೀತಾಯುನಮಃ
ಒಕ್ಕುಂದವಾಸಾಯುನಮಃ
ಗರಗಾಧಿಶಾಯುನಮಃ
ಭವಲೀಲಾಯುನಮಃ
ಶಾಪಮೂರ್ತಿಯುನಮಃ
ದಾಕ್ಷಾಯುಣಿಕುವರಾಯುನಮಃ
ಕಾಳಿಕಾ ಬಂಧುವಾಯುನಮಃ
ಜಗದ್ಗುರುವಾಯುನಮಃ
ಸಚ್ಚಿದಾನಂದ ರೂಪಾಯುನಮಃ
ಸರ್ವಜ್ಞಾಯುನಮಃ
ಗುಣಾತ್ಮನಾಯುನಮಃ
ವಿಭವಾಯುನಮಃ
ನಿರಾಕಾರಾಯುನಮಃ
ಸಗುಣಾಯುನಮಃ
ದಕ್ಷಯುಜ್ಞ ಗಂಧಾಯುನಮಃ
ಫಾಲನೇತ್ರ ಜನಿತಾಯುನಮಃ
ಮಾರಿಬಂಧುವಾಯುನಮಃ
ದಾಕ್ಷಾಯುಣಿ ಸುತಾಯುನಮಃ
ದಕ್ಷಾಸುರ ದೇವಾಯುನಮಃ
ಅಮೋಣಿ ಬರುವರಾಯುನಮಃ
ನಿರಾಕಾರಾಯುನಮಃ
ಶಾಂತಾಯುನಮಃ
ಜಗನ್ಮಂಗಲಾಯುನಮಃ
ಸರ್ವಶಕ್ತ್ಯಾಯುನಮಃ
ಕೋಟಿ ಸೂರ್ಯಪ್ರಕಾಶ್ಯಾಯುನಮಃ
ಲಿಂಗರೂಪಾಯುನಮಃ
ಬೀಜರೂಪಾಯುನಮಃ
ಬ್ರಹ್ಮಜ್ಞಾಯುನಮಃ
ಬ್ರಹ್ಮಚರ್ಯನಮಃ
ಭಗವಂತಾಯುನಮಃ
ದಿವ್ಯಾಯುನಮಃ
ಅದ್ವಿತೀಯಾಯುನಮಃ
ಅಘಟಿತಾಯುನಮಃ
ಸಿದ್ಧಿರಾಮಾಯುನಮಃ
ತ್ರೈಲೋಕ್ಯ ಪೂಜಾಯುನಮಃ
ವಿಭುವಾಯುನಮಃ
ಜಗನ್ಮೂಲಾಯುನಮಃ
ಜಗತಪ್ರಥಮಕಾರಣಾಯುನಮಃ
ಸಮಸ್ತ ನಿರ್ಮಾಣಾಯುನಮಃ
ಜೀನ ಸ್ವರೂಪಾಯುನಮಃ
ಶರ್ಮ ಕುವರಾಯುನಮಃ
ಕರಿಗೌಡ ಪ್ರೀತಾಯುನಮಃ

ರುವೋದ್ಧಾರಾಯನಮಃ
ಶಿದ್ಧಲಿಂಗ ಗುರುವಾಯನಮಃ
ಕೈಲಾಸ ಸಂಚಾರಾಯನಮಃ
ವಿಶ್ವಾತ್ಮರಾಯನಮಃ
ವಿಶ್ವಕುಟುಂಬಾಯನಮಃ
ನಿರ್ಗುಣಾಯನಮಃ
ನಿರ್ಲೆಪವಾಯನಮಃ
ದೇವಮುಕುಟಾಯನಮಃ

ಉದಾರ ಗುಣಾಯನಮಃ
ದಯಾಸಾಗರಾಯನಮಃ
ನೀಲಕಂಠಾಯನಮಃ
ಬಿಂಬಾಧರಾಯನಮಃ
ತ್ರಿಲಿಂಗ ರೂಪಾಯನಮಃ
ತ್ರಿಗುಣಾತ್ಮಾಯನಮಃ
ಗುಣಾತೀತೆಯನಮಃ

## ಸ್ತೋತ್ರ

ಗುಣಾತೀತಂ ಗುಣಾತ್ಮಾಯ ವಿಭವಾಯ| ಸುಗುಣಾತ್ಮಾಯ ಸುಗುಣ ರೂಪಂ ಪರಮಾತ್ಮನೇ ॥

ನಮಃ ಶಾಂತರೂಪಾಯ ತ್ರೈಲೋಕ್ಯ ರೂಪಾಯ। ಜಗನ್ಮಿತ್ರಾಯ ಶಂಭುವೇನಮಃ ॥ ೧ ॥

ನಮೋ ಸರ್ವಲೋಕ ಕಾರಣಾಯ ಸರ್ವೋತ್ಪತ್ತಿ ಮೂಲಾಯ। ನಮೋ ಸರ್ವೋತ್ತಮಾಯನಮಃ ॥

ನಮೋ ಶಾಸ್ತ್ರಪಾರಾಂಗತಾಯ ಶಾಸ್ತ್ರ ಮೂಲಾಯ। ಸರ್ವಸಿದ್ಧಿರೂಪಾಯನಮಃ ॥ ೨ ॥

ಮಾಯಾಚ್ಛಾದಿತ ರೂಪಾಯ ಮಾಯಾ ಪ್ರೇರಿತಾಯ| ಮಯಾತ್ಮ ಜನಕಾಯ ಮಹದೇವಾಯನಮಃ ॥

ಭಾಯಾತ್ಮಜಾಯಜಾಯ ಜನ್ಮ ದುಃಖ ನಾಶಾಯ | ಭಾವಾತ್ಮಕದೇವ ಬ್ರಹ್ಮನಿಷ್ಮಸನಾತನಾಯನಮಃ ॥ ೩ ॥

ಸರ್ವಜ್ಞಂ ಸರ್ವಾಂತರ್ಗತ ರೂಪಂ ಸರ್ವಶಕ್ತಿ ನಮಃ | ಸರ್ವಮೂಲ ಕಾರಣಂ ದೇವಂ ನಮೋನಮಃ ॥

ಶರ್ವಾಯ ರುದ್ರಾಯ ಮಹಾತ್ಮಾಯ। ಪರ್ವತ ಕುವರಿ ಕುಮಾರಾಯ ನಮೋನಮಃ ॥೪॥

ಅದ್ವಿತೀಯಂ ಅನಂತ ರೂಪಂ ಅಭವಂ ನಮಃ। ಅಘಟಿತಾತ್ಮಂಅನಂತಲೀಲಾ
ಮಯಂ ನಮಃ ॥
ನಿಶ್ಚಲಂ ನಿರಾಕಾರಂ ನಿಗಮಾತೀತಂ ನಮಃ। ನಿತ್ಯನಿರವಹಂ ನಿಜರೂಪಂ
ಮಡಿವಾಳೇಶಂನಮಃ ॥ ೫ ॥

## ಅಷ್ಟಕ

ದೇವ ದೇವ ಪಾವನಾತ್ಮಕ ಭಾವಕೊಲಿಯುವ ದೇವನೊ ।
ಬಾವನಾತ್ಮಕ ಭವದ ಲೀಲೆಯು ದೇವ ಕರುಣಾ ಲೋಲನೋ ॥
ಶೂಲಪಾಣಿಯ ಬಾಲನೆನಿಸುವ ವ್ಯಾಲಧರದಧಿ ದೇವನೋ ।
ಕಾಲಕಾಲಕೆ ಜಗವ ರಕ್ಷಿಪದೇವ ಗರಗಾಧೀಶನೋ ॥ ೧ ॥
ಕಿತ್ತೂರುದೊಳು ಪುಟ್ಟಿ ಕಲ್ಮಠ ಪಟ್ಟಗಧಿಕಾರಿಯಾದನೋ ।
ಶ್ರೇಷ್ಠ ತಂದೆಗೆ ಲೀಲೆ ತೋರುತೆ ನಿತ್ಯ ಜಗದೊಳು ಮೆರೆದನೋ ॥
ಶ್ರೇಷ್ಠವಹ ಕರ್ನಾಟಕಾಂಬೆಯ ಶ್ರೇಷ್ಠಕುವರ ನೀತನೋ ।
ಸುಟ್ಟು ಭಸ್ಮವ ಮಾಡಿದಾಗಳೇ ದೇವ ಗರಗಾಧೀಶನೋ ॥ ೨ ॥
ಬಾಪುರಾಜಗೆ ಶಾಪನೀಯುತೆ ಭೂಪನೆನಿಸುತೆ ಮೆರೆದನೋ ।
ಕೋಪದಿಂದಲಿ ತನ್ನ ಬಟ್ಟೆಯ ಕೋಟೆದ್ವಾರದ ಸುಟ್ಟನೋ ॥
ರೂಪಧರಿಸುತೆ ವರದಿಗಂಬರ ಮೂರ್ತಿಯನಿಸುತೆ ಮೆರೆದನೋ ।
ಪಾಪನಾಶಕ ಪರಮದೇವರ ದೇವ ಗರಗಾಧೀಶನೋ ॥ ೩ ॥
ನಿತ್ಯರೂಪವ ಕಾಣುತಾಗಳೆ ಸತ್ಯನೆನಿಸುತೆ ಮೆರೆದನೋ ।
ಸ್ತುತ್ಯಕಾರ್ಯವ ಗೈಯುತಾಗಳೇ ನಿತ್ಯಜಗದೊಳು ಮೆರೆದನೋ ॥
ನಿತ್ಯನಾಗುತೆ ಜಗದಿ ಚರಿಸಿದ ಸೃಷ್ಟಿಪಾಲಕ ದೇವನೋ ।
ಬೃತ್ಯರಂ ಪರಿಪಾಲಿಸುವನೋ ಶ್ರೇಷ್ಠಗರಗಾಧೀಶನೋ ॥ ೪ ॥
ಕಾಶಿಪುರದೊಳು ವಾಸಮಾಡುತೆ ಈಶಸೇವೆಯ ಗೈದನೋ ।
ವಾಸವಾತ್ಮಕ ಪಂಡಿತಾಧ್ಯರ ಸಭೆಯನುತಾ ಗೆಲಿದನೋ ॥
ಭೂಸುರೋತ್ತಮ ಗುರುವು ಎನಿಸುತೆ ಏಸುಕಾಲದಿ ಮೆರೆದನೋ ।
ಸಾಸಿರಾತ್ಮಕ ಫಣೆಯ ಧರಿಸಿದ ಬಾಲ ಗರಗಾಧೀಶನೋ ॥ ೫ ॥
ಬ್ರಹ್ಮದಂಪತಿ ಕುವರನಲ್ಲಿ ವಾಸಮಾಡಿದ ದೇವನೋ ।
ಬ್ರಹ್ಮವಿರಚಿತ ಸೃಷ್ಟಿಯೊಳುತಾ ಬ್ರಹ್ಮಜ್ಞಾನದಿ ಮೆರೆದನೋ ॥

ಬ್ರಾಹ್ಮಣಾತ್ಮಕ ದೇವನೆನಿಸುವ ಸಿದ್ಧಮಲ್ಹಾರ ಮಿತ್ರನೋ |
ಬ್ರಹ್ಮವಿರಚಿತ ಸೃಷ್ಟಿಯೊಳುತಾ ಶ್ರೇಷ್ಠಗರಗಾಧೀಶನೋ || ೬ ||
ಭಕ್ತಮಲ್ಲಣ ಭಕ್ತಪ್ರೀತನೊ ಸ್ತುತ್ಯವಂತರ ದೇವನೋ |
ಭಕ್ತಿಮಾರ್ಗವ ತೋರಿ ಜಗಕೆ ನಿತ್ಯಗುರುತಾ ಮೆರೆದನೋ |
ಶಕ್ತಿವಿರಚಿತ ಸೃಷ್ಟಿಯೊಳುತಾ ಮುಕ್ತಿ ಮಾರ್ಗವ ತೋರ್ವನೋ |
ಭಕ್ತಿಮಾರ್ಗಕೆ ನಿತ್ಯನೆನಿಸುವ ಮುಖ್ಯ ಗರಗಾಧೀಶನೋ || ೭ ||
ಸೊಗಲ ಪುರದೊಳು ವಾಸಮಾಡಿದ ಪರಮ ಯೋಗಾನಂದನೋ |
ಅಘಟಿತಾತ್ಮಕ ನಿಗಮಗೋಚರ ನಿತ್ಯನಿರ್ಮಳ ಶೀಲನೋ ||
ಜಗದಿ ಗರಗದಿ ತನ್ನ ದೇಹವನಿಟ್ಟ ನಿತ್ಯ ಮಹಾತ್ಮನೋ |
ಜಗದ ಭಕ್ತರು ನಿತ್ಯ ಹೊಗಳಿಪು ಸ್ತುತ್ಯ ಮಡಿವಾಳೇಶನೋ || ೮ ||

**ಮಂಗಳಾಚರಣ**

ಜಯವಿಂದು ಬೆಳಗುವೆ ಮಡಿವಾಳೇಶ್ವರನೇ |
ಮಡಿವಾಳೇಶ್ವರನೇ | ಮೃಡಹರ ಶಿವನೇ || ಪ ||
ಪ್ರಭುವರ ತಪಫಲ ನಿಜದಧಿಕಾರ | ಅಭವನ ಕುವರನೀ ನಿಜಸುಖಧಾರಿ
ಈ ಭವನೀಗಿಸೋ ಭವ ಪಾಶ ಹಾರಿ || ೧ ||
ಕಿತ್ತೂರ ಕಲ್ಮಠ ಪಟ್ಟಾಧಿಕಾರಿ | ಚಿತ್ತರಿಸಿದೆ ನೀ ಜಗದಾಧಾರಿ | ನಿತ್ತರಿ...
ಸೆನ್ನನೀ ಜಗದೊಳ್ಸಂಸಾರ || ೨ ||
ವಿಶ್ವನಾಥಪುರದಿ ವಿದ್ಯೆ ಕಲಿತವನೇ | ವಿಶ್ವದ ಪಂಡಿತರ ಘಾಷೆಯುಗೆಲಿದವನೇ||
ವಿಶ್ವೇಶ ಸುತನೆಂದು ಜಗದಿ ಮೆರೆದವನೆ || ೩ ||
ಭಕ್ತಮಲ್ಲಣನ ಭಕ್ತಿಗೊಲಿದವನೇ | ಭಕ್ತರ ಮನವಾಂಛಿತ ಪೂರಿಪನೇ
ಮುಕ್ತಿಮಾರ್ಗವ ನೀ ನಿತ್ಯ ತೋರುವನೇ || ೪ ||
ವರದಿಂಗರ ರೂಪ ನಿತ್ಯದಿಸುವನೇ | ಶರಣ ಜನಕಾಧಾರಿಯೆನಿಸಿ ಮೆರೆ
ದವನೇ | ಗರಗ ಮಠದೊಳು ನಿತ್ಯ ಮೆರೆದವನೇ || ೫ ||

**ಸಮಾಪ್ತಿ**

## —: ನಮ್ಮ ಮುಂದಿನ ಪುಸ್ತಕಗಳು :—

೧. ಶ್ರೀಗುರು ಮಡಿವಾಳೇಶ್ವರರ ವಚನ ಸಂಗ್ರಹ

೨. ಶ್ರೀಗುರು ಮಡಿವಾಳೇಶ್ವರರ ಕಾವ್ಯಮಾಲಾ

೩. ಕನ್ನಡ ಕೇಸರಿ ವೀರರಾಣಿ ಚೆನ್ನಮ್ಮ (ನಾಟಕ)

೪. ಪಾರ್ಥಗರ್ವಭಂಗ ಪ್ರಮೀಲಾ (ನಾಟಕ)

೫. ವೈಷ್ಣವ ಶಿಖಾಮಣಿ (ಚಂದ್ರಹಾಸ)

೬. ಪೂಜ್ಯ ಬಾಪೂಜಿ

ಸ್ಟಾಕಿಷ್ಟರು:—

**ಶ್ರೀ. ವ್ಹಿ. ಎಸ್. ಮುಪ್ಪಯ್ಯನಮಠ ಗರಗ**

**ಶ್ರೀ. ಬಾಳಪ್ಪ ಜೀವಪ್ಪ ಯಲಿಗಾರ ಗರಗ**

**ಬಾಳಪ್ಪ ಸಿದ್ದಪ್ಪ ಯಲಿಗಾರ ಗರಗ**

ಪ್ರಕಾಶಕರು: ರಾಮಚಂದ್ರ ಬಾಳಕೃಷ್ಣ ಎಲಿಗಾರ, ಗರಗ.
ಮುದ್ರಕರು: ಜಿ. ಆರ್. ಪಂಡಿತ ಕೇಳಕರ ಪ್ರೆಸ್, ಧಾರವಾಡ.